# ಅಚಲ ತಿಂಗಳ ಪತ್ರಿಕೆ

28

ಬೆಲೆ - ಬಿಡಿಪ್ರತಿ : 4 ರೂ.

ಸೆಪ್ಟೆಂಬರ್ - 2004

## ಒಳಗೇನಿದೆ






ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 19 ಸಂಚಿಕೆ : 9

ಸಂಪಾದಕ ಮಂಡಲಿ

ಎನ್. ಗಾಯತ್ರಿ
ನೇಮಿಚಂದ್ರ, ದೇವಿ,
ಶಾಂತಾನಾಗರಾಜ್
ಹೆಚ್. ಎನ್: ಗೀತಾ
ಹೇಮಲತಾ ಮಹಿಷಿ

ಪ್ರಕಾಶಕರು
ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,
ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು. ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


**Achala - Edited by Dr. N. Gayathri**

**Published by Dr. G. Ramakrishna on behalf of Jagruthi Mahila Adhyayana Kendra**

**Printed at**
Lipi Mudrana
**Bangalore - 560 004**


ಆತ್ಮೀಯರೆ,

ಕಳೆದ 19 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಮಹಿಳಾ ಚಳುವಳಿಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಇನ್ನೂ ಬೆಟ್ಟದಷ್ಟು ಕೆಲಸವಾಗಬೇಕಿದೆ. ಈ ಮಹತ್ತರ ಕಾರ್ಯದಲ್ಲಿ ನಾವೆಲ್ಲರೂ ಒಟ್ಟಾಗಿ ಶ್ರಮಿಸಬೇಕಿದೆ. ನೀವೂ ಅಚಲ ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯನ್ನಾಗಿ ಮಾಡಿಕೊಳ್ಳಿ ಮತ್ತು ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸುವಲ್ಲಿ ನೆರವಾಗಿ.

ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.

## ಅಚಲದ ಚಂದಾ ಬದಲಾಗಿದೆ

ವಾರ್ಷಿಕ ಚಂದಾ - ರೂ. 50/- (ವ್ಯಕ್ತಿಗಳಿಗೆ)
ರೂ. 100/- (ಸಂಸ್ಥೆಗಳಿಗೆ)
ಅಜೀವ ಚಂದಾ - ರೂ. 300/- (ವ್ಯಕ್ತಿಗಳಿಗೆ)
ರೂ. 400/- (ಸಂಸ್ಥೆಗಳಿಗೆ)

Total Number of Pages : 16


**ಅಚಲ ವಿಳಾಸ**

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ
ಬನಶಂಕರಿ 3ನೇ ಹಂತ, ಬೆಂಗಳೂರು - 560 085

## ಸಂಪಾದಕೀಯ

# ಪ್ರತಿಭಟನೆಯ ಹೊಸರೂಪ

ನಾಗಪುರದ ಅಕ್ಕುಯಾದವನಿಗೆ ಕಸ್ತೂರಬಾ ಕೊಳಗೇರಿಯ ಮಹಿಳೆಯರು ಹೊಡೆದು ಸಾಯಿಸಿದ್ದು ನಾಗರಿಕ ಜಗತ್ತಿನಲ್ಲಿ ಭಾರಿ ಸುದ್ದಿ ಮಾಡಿತು. ನ್ಯಾಯ-ಅನ್ಯಾಯಗಳ ಬಗ್ಗೆ ಕಾನೂನಿನ ಸಫಲತೆ-ವಿಫಲತೆಗಳನ್ನು ಕುರಿತು ಮರುಚಿಂತನೆಗೆ ಹಚ್ಚಿತು. ನಾಗಪುರದ ಮಹಿಳೆಯರ ಕ್ರಿಯೆಯನ್ನು ಕಾನೂನಿನ ದೃಷ್ಟಿಯಿಂದ ಸರಿಯಾದ ಕ್ರಮ ಎನ್ನಲಾಗದಿದ್ದರೂ ಬಹಿರಂಗವಾಗಿ ಅದಕ್ಕೆ ಭೇಷ್ ಎನ್ನದಿದ್ದರೂ ಇಡೀ ಮಹಿಳಾ ಸಮುದಾಯದ ನೊಂದ ಮನಗಳಿಗೆ ಈ ಕೃತ್ಯ ಸರಿ ಎನಿಸಿದೆ. ಅಂಗೈನಲ್ಲಿ ಅಪರಾಧಗಳು ಕಾಣುತ್ತಿರುವಾಗಲೂ ಸಾಕ್ಷಿ ಪುರಾವೆಗಳ ಕೊರತೆಯಿಂದ ಅಪರಾಧಿಗಳು ಶಿಕ್ಷೆಗೆ ಒಳಗದೆ ಹೋಗುತ್ತಿರುವುದನ್ನು ಕಂಡ ಹೃದಯವಂತ ಸಮಾಜವು ನಿರಾಸೆ, ಆತಂಕ ಸಿನಿಕತನಕ್ಕೆ ಒಳಗಾಗುವುದನ್ನು ಕಾಣುತ್ತಲೇ ಬಂದಿದ್ದೇವೆ. ನಾಗಪುರದ ಮಹಿಳೆಯರ ಈ ಕೃತ್ಯ ಅಪರಾಧ ಲೋಕದ ಕೊಲೆ ಪಾತಕಿಗಳಿಗೆ ಪಾಠವಾಗುವುದಕ್ಕಿಂತ ಹೆಚ್ಚಾಗಿ ನಿಧಾನ ನಡೆಯ ನ್ಯಾಯಾಂಗಕ್ಕೆ ಸವಾಲೆಸೆದಿದೆ. ನ್ಯಾಯವು ಕರ್ಮಠ ತಾಂತ್ರಿಕ ವಿಧಿ ವಿಧಾನಗಳಲ್ಲಿ ಕಳೆದು ಹೋಗದೆ ಮಾನವೀಯತೆಯ ಹೃದಯ ಸ್ಪರ್ಶವನ್ನು ಪಡೆಯಬೇಕೆಂಬ ಅಗತ್ಯವಿದೆಯೆಂಬುದನ್ನು ಎತ್ತಿ ತೋರಿಸಿದೆ.

ಇಂತಹುದೇ ಘಟನೆ ಕೆಲವು ವರ್ಷಗಳ ಹಿಂದೆ ಕರ್ನಾಟಕದಲ್ಲಿಯೂ ನಡೆದದ್ದು ನೆನಪಿಗೆ ಬರುತ್ತದೆ. ಅತ್ಯಾಚಾರಿಯನ್ನು ಕೊಲೆ ಮಾಡದಿದ್ದರೂ ಅವನನ್ನು ಸಾಯುವಂತೆ ಮಹಿಳೆಯರ ಗುಂಪು ಬಡಿದು ಹಾಕಿತ್ತು. ಕಳೆದ ತಿಂಗಳು ಹೆಗ್ಗಡ ದೇವನ ಕೋಟೆಯ ಆಲನಹಳ್ಳಿಯಲ್ಲಿ ವಿದ್ಯಾರ್ಥಿನಿಯರೊಂದಿಗೆ ಅಸಭ್ಯವಾಗಿ ವರ್ತಿಸಿ, ಕಿರುಕುಳ ನೀಡುತ್ತಿದ್ದನೆಂಬ ಆರೋಪದಿಂದ ಬೇಸತ್ತ . ಗ್ರಾಮಸ್ಥರು ಶಿವಸ್ವಾಮಿಯೆಂಬ ಶಾಲಾ ಶಿಕ್ಷಕನನ್ನು ಶಾಲೆಯ ಆವರಣದಲ್ಲಿಯೇ ಎಲ್ಲರ ಸಮ್ಮುಖದಲ್ಲಿ ದನ ಬಡಿಯುವಂತೆ ಬಡಿದ ಘಟನೆ ನಡೆದಿದೆ. ಇಂತಹ ಘಟನೆಗಳು ಹೀಗೆ ನಡೆಯುತ್ತಲೇ ಹೋದರೆ ಮಹಿಳೆಯರೂ ಕೂಡ ಹೊಸ ಹೊಸ ಪ್ರತಿಭಟನೆಯ ರೂಪಗಳನ್ನು ಕೈಗೊಳ್ಳುವದಕ್ಕೆ ನಮ್ಮ ವ್ಯವಸ್ಥೆಯೇ ದಾರಿ ಮಾಡಿಕೊಡುತ್ತದೆ. ಈ ಸಂದರ್ಭದಲ್ಲಿ ಮಣಿಪುರದ ಮಹಿಳೆಯರ ಬೆತ್ತಲೆ ಪ್ರತಿಭಟನೆಯನ್ನು ಸ್ಮರಿಸಬೇಕು. ಅಲ್ಲಿನ ಜನರಿಗಾಗುತ್ತಿರುವ ಅನ್ಯಾದ ವಿರುದ್ದ ಧ್ವನಿಯೆತ್ತುವ ಹೋರಾಟಗಾರರ ಧ್ವನಿಯನ್ನು ಅಡಗಿಸಲು ಸೇನಾಪಡೆಗಳು ಮನೋರಮಾಳ ಮೇಲೆ ಅತ್ಯಾಚಾರವೆಸಗಿ ಕೊಲೆಗೈದ ಘಟನೆಗೆ ಮಹಿಳೆಯರು ಆಯ್ದುಕೊಂಡ ಪ್ರತಿಭಟನಾ ಮಾರ್ಗ ಅವರ ಅಸಹಾಯಕತೆಯನ್ನು ಮತ್ತು ರೋಷವನ್ನು ಸೂಚಿಸುತ್ತದೆ. ಜೊತೆಗೆ ಅನ್ಯಾಯವನ್ನು ಹೇಗಾದರೂ ಅತ್ಯಂತ ಉಗ್ರವಾಗಿ ಪ್ರತಿಭಟಿಸಬೇಕೆಂಬ ಆತ್ಮಸ್ಥೈರ್ಯವೂಅವರಿಗಿದೆ. ಲಜ್ಜೆಯಿರದ ಸಮಾಜಧ ಕ್ರೌರ್ಯವನ್ನು ಪ್ರತಿಭಟಿಸಲು ಅವರೂ ಲಜ್ಜೆಬಿಟ್ಟು ಈ ನಾಗರೀಕ ಸಮಾಜದಲ್ಲಿ ಅವರಿಗೆ ಒದಗಿರುವ ದುಃಸ್ಥಿಯನ್ನು ಇಡೀ ಜಗತ್ತಿಗೆ ಕೂಗಿ ಹೇಳಲು ಹೊರಟ ಹೋರಾಟದ ಕ್ರಮವಿದು.

ಇಂದು ಮಹಿಳೆಯರ ಮೇಲಿನ ಕ್ರೌರ್ಯ ದಿನದಿಂದ ದಿನಕ್ಕೆ ಹೆಚ್ಚುತ್ತಿದೆ. ಒಂದು ರೀತಿಯಲ್ಲಿ ಕ್ರೌರ್ಯವೇ ಸಮಾಜದ ದೈನಂದಿನ ಕ್ರಮವಾಗಿಬಿಟ್ಟದೆ. ಇಂತಹ ಸಂದರ್ಭದಲ್ಲಿ ಮಹಿಳೆಯರು ಸಾಂಪ್ರದಾಯಿಕ ಪ್ರತಿಭಟನಾ ಮಾರ್ಗಗಳನ್ನು ಕೈ ಬಿಟ್ಟು ಹೊಸ ವಿಧಾನವನ್ನು ಅನುಸರಿಸಿದರೆ ಅದಕ್ಕೆ ಸಮಾಜ, ಸರ್ಕಾರ, ನ್ಯಾಯಾಂಗಗಳೇ ಕಾರಣವಾಗುತ್ತದೆ. ಮಹಿಳೆಯರು ಕಲಿಸುವ ಈ ಪಾಠ ಸರ್ಕಾರ, ಸಮಾಜ ಮತ್ತು ನ್ಯಾಯಾಂಗದ ಕಣ್ಣು ತೆರೆಸುವುದೇ ? ಸಕಾಲದಲ್ಲಿ ಅವರು ಎಚ್ಚತ್ತುಕೊಳ್ಳದಿದ್ದರೆ ಪ್ರಜಾಪ್ರಭುತ್ವದ ಮೂಲ ಸತ್ವಕ್ಕೆ ಧಕ್ಕೆಯಾಗುತ್ತದೆ. ಜನರ ವಿಶ್ವಾಸ ದೂರ ಸರಿಯುತ್ತದೆ.

- ಎನ್ ಗಾಯತ್ರಿ.

# ಶ್ರೀಮತಿ ಜಿ. ಗೀತಾ ನಾಗಭೂಷಣರ ಕಥೆಗಳಲ್ಲಿ ಪ್ರಾದೇಶಿಕತೆ

ಕಾದಂಬರಿಕಾತಿ ಎಂದೇ ಹೆಚ್ಚು ಪರಿಚಿರತರಾದ ಶ್ರೀಮತಿ ಜಿ. ಗೀತಾ ನಾಗಭೂಷಣ ಅವರು ಕತೆಗಾರ್ತಿಯೂ ಹೌದು ಎಂದು ದನಿ ಹೊರಡಿಸಿದ್ದೇನೆ. ಏಕೆಂದರೆ ಎರಡು ಡಜನ್‌ಗಿಂತಲೂ ಹೆಚ್ಚಿನ-ಸಂಖ್ಯೆಯ ಕಾದಂಬರಿಗಳನ್ನು ಸಾರಸ್ವತ ಲೋಕಕ್ಕೆ ನೀಡಿರುವ ಈ ಲೇಖಕಿ, ತಮ್ಮ ಬದುಕಿನ ಈ ಸುದೀರ್ಘ ಅವಧಿಯಲ್ಲಿ ಎರಡು ಕಥಾ ಸಂಕಲನಗಳನ್ನು ಮಾತ್ರ ಪ್ರಕಟಿಸುವುದು ಗಮನಿಸಿದರೆ ನಾನು ಹೇಳಿದ್ದು ಸರಿಯಾಗಿದೆಯೆಂದೇ ಭಾವಿಸಿಕೊಂಡಿದ್ದೇನೆ. ಹಾಗೇ ನೋಡಿದರೆ ನೂರಾರು ಕತೆಗಳನ್ನು ರಚಿಸಿರುವ ಗೀತಾ ನಾಗಭೂಷಣ ಅವರ, ಅನೇಕ ಕತೆಗಳು ಕನ್ನಡದ ಜನಪ್ರಿಯ ಪತ್ರಿಕೆಗಳಲ್ಲಿ, ಬಹುತೇಕ ವಿಶೇಷಾಂಕಗಳಲ್ಲಿ ಪ್ರಕಟಿಸುವುದರ ಮೂಲಕ ಕತೆಗಾರ್ತಿಯಾಗಿಯೂ ನಮಗೆ ಚಿರಪರಿಚಿತರೆ.

ನಿಲಗಂಗಾ, ಹಸಿ ಮಾಂಸ ಮತ್ತು ಹದ್ದುಗಳು, ಮಾಪುರ ತಾಯಿಯ ಮಕ್ಕಳು, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿಪುರಸ್ಕೃತ ಬೃಹತ್ ಕಾದಂಬರಿ ಬದುಕು ಇತ್ಯಾದಿ ಕಾದಂಬರಿಗಳು, ಹೆಚ್ಚೂ ಕಡಿಮೆ ಹೈದರಾಬಾದ ಕರ್ನಾಟಕದ ಆದರಲ್ಲೂ ಕಲಬುರ್ಗಿ ಜಿಲ್ಲೆಯ ಆಡು ಭಾಷೆಯಲ್ಲೇ ರಚನೆಯಾಗಿರುವುದು ನಾವು ಕಾಣುತ್ತೇವೆ. ಜೊತೆಗೇ ಗ್ರಾಂಥಿಕ ಭಾಷೆಯಲ್ಲಿಯೂ ಹೆಚ್ಚಿನ ಬರವಣಿಗೆ ಲೇಖಕಿ ನೀಡಿದ್ದಾರೆ. ಆದರೆ ಈ ಶಿಷ್ಟ ಭಾಷೆಯಲ್ಲಿ ಕತೆಗಳು ಮಾತ್ರ ಅತೀ ವಿರಳವೆಂದೇ ಹೇಳಬೇಕು. ನನ್ನ ಮಾತಿನ ತಾತ್ಪರ್ಯವೆಂದರೆ, ಕಥಾ ರಚನೆಯಲ್ಲಿ ಶ್ರೀಮತಿ ಗೀತಾ ಅವರ ಒಲವು - ಹೆಚ್ಚು ಹೆಚ್ಚು ಪ್ರಾದೇಶಿಕ ಭಾಷೆಯತ್ತಲೇ ಇದೆ ಅನ್ನುವುದೇ ಆಗಿದೆ.

ಸ್ವಾತಂತ್ರ್ಯಪೂರ್ವದಲ್ಲೇ ರಾಷ್ಟ್ರಕವಿ ಕುವೆಂಪು ಅವರು ಮಲೆನಾಡಿನ ಆಡು ಭಾಷೆಯನ್ನು ತಮ್ಮ ಬರವಣಿಗೆಯಲ್ಲಿ ಯಥೇಚ್ಛವಾಗಿ ಬಳಸಿಕೊಂಡಿದ್ದರೆನ್ನುವ ಕುತೂಹಲಕರ ಸಂಗತಿ ಅವರ ರಚನೆಗಳಿಂದ ತಿಳಿದುಬರುತ್ತದೆ. ಇಲ್ಲಿ ಸಣ್ಣ ಕತೆಗಳ ಜನಕ ಮಾಸ್ತಿ, ದೇವುಡು, ಲಂಕೇಶ, ಸದಾಶಿವ, ಚಿತ್ತಾಲ ಮೊದಲಾದವರನ್ನೆಲ್ಲ ಬೇಕೆಂದೇ ಬಿಟ್ಟು ಕುವೆಂಪು ಅವರ ಹೆಸರು ಉಲ್ಲೇಖಿಸಿದ್ದೇನೆ. ಕಾರಣವಿಷ್ಟೇ.., ಕುವೆಂಪು ಅವರು ಮೂಲತಃ ಕವಿ ಮತ್ತು ನಾಟಕಕಾರರಾಗಿದ್ದೂ ಅನೇಕ ಸಣ್ಣ ಕತೆಗಳನ್ನು ಬರೆದು ಕತೆಗಾರರೂ ಅನ್ನಿಸಿಕೊಂಡಿದ್ದಾರೆ. ಕೆ.ವಿ. ಪುಟ್ಟಪ್ಪ ಅವರ ಯಾರೂ ಅರಿಯದ ವೀರ ಕಥೆಯಲ್ಲಿ ಎಂಥಾ ಸೊಗಸಾದ ಆಡುನುಡಿಗಳನ್ನು ಬಳಸಿಕೊಂಡಿದ್ದಾರೆನ್ನುವದಕ್ಕೆ ಉದಾಹರಣೆ ನೋಡುವುದಾದರೆ, ಸುಬ್ಬಣ್ಣಗೌಡರು ಲಿಂಗನನ್ನು ಕುರಿತು :

ಮೇಲ್ಮಳೆ ಬಹಳ ಜೋರಾಗಿದೆಯಂತೆ, ಶೃಂಗೇರಿ ಆ ಕಡೆಯಂತೂ ಒಂದು ನಿಮಿಷ ಬಿಡದೇ ಹೊಡೆಯುತ್ತಿದೆಯಂತೆ. ಎಂದು ಹೇಳುತ್ತಾರೆ. ಇದೇ ಕತೆಯಲ್ಲಿ ಲಿಂಗ ಹೇಳ್ತಾನೆ...

ಹೌದ್ರಯ್ಯ, ಎಲ್ಲಾ ಕಟ್ಟಿದ್ದೇನೆ. ತುಂಗೆದನೆ, ಪುಟ್ಟಗುಡ್ಡ ಯಲ್ದು ಮಾತ್ರ ಕೊಟ್ಟಿಗೆಗೆ ಬರಲೇ ಇಲ್ಲ ಎಂದು

ಲೇಖಕ ಯಾ ಲೇಖಕಿಯಾದವರು ನಿರಂತರ ಶೋಧಕರೆಂದು ನಾನು ಭಾವಿಸಿದ್ದೇನೆ. ಅಂತರಾತ್ಮದ ಉತ್ಖನನದ ಮುಖೇನ ಬರವಣಿಗೆಗೆ ತೊಡಗಿಸಿಕೊಂಡ ಒಬ್ಬ ಸೈದ್ಧಾಂತಿಕ ಕತೆಗಾರನನ್ನು ಕುರಿತು ಇನ್ನೊಬ್ಬ ಮಹಾನ ಲೇಖಕ, ಕತೆಗಾರನ ವ್ಯಾಖ್ಯಾನ ಹೇಗಿದೆ ಅನ್ನುವುದೊಂದಿಷ್ಟು ನಾವಿಲ್ಲಿ ನೋಡಬಹುದೇನೋ. ದೇವನೂರ ಮಹಾದೇವರನ್ನು ಕುರಿತು ಪಿ. ಲಂಕೇಶ ಅವರು :

ಮಹಾದೇವ ಸೋಮಾರಿತನದ, ಡೋಲಾಯಮಾನದ, ಹಿಂಜರಿಕೆಯ ವ್ಯಕ್ತಿ. ಇದೆಲ್ಲದರ ಆಳದಲ್ಲಿ ಹರಿತವಾದ ಸೂಕ್ಷ್ಮ ಮನಸ್ಸಿನ ನ್ಯಾಯವಂತ ಮನುಷ್ಯ ಕೂಡ ಎಂದು ಕರೆಯುತ್ತಲೇ, ಸಾಹಿತಿಯಾದವನು ಎಲ್ಲರಂತೆ ನೋಡ ಬಯಸುತ್ತಾನೆ. ಮನುಷ್ಯ, ಮರ, ಪ್ರಾಣಿ, ಆಕಾಶ, ಮಣ್ಣು ಇದೆಲ್ಲದರ ಖಚಿತ ಗುಣ ಮತ್ತು ಗಾತ್ರ ಅವನಿಗೆ ತಿಳಿಯುವುದೇ ಹೀಗೆ. ಆದರೆ ಎಲ್ಲರಂತೆ ನೋಡುತ್ತಿರುವಾಗಲೇ ಅವನಿ/ಳಿಗೆ ವಿಶೇಷವಾದದ್ದು ಕಾಣುತ್ತದೆ. ಅಂತಹ ವಿಶ್ವಾಸ ಅವನ/ಳಲ್ಲಿದ್ದರೆ ಮಾತ್ರ ಅವನು/ಳು ಅದನ್ನು ಆದಷ್ಟು ಸಮರ್ಪಕವಾಗಿ ಹೇಳುವ ವಿಧಾನಗಳನ್ನು ಕಂಡುಕೋಳ್ಳುತ್ತಾನೆ/ಳೆ. ಪ್ರೀತಿ, ಔದಾರ್ಯವಿಲ್ಲದಿದ್ದರೆ, ತನ್ನ ಬಗ್ಗೆ ನಿಷ್ಠುರತೆ ಮತ್ತು ಇತರರ ಬಗ್ಗೆ ಸಹಾನೂಭೂತಿ ಇಲ್ಲದಿದ್ದರೆ ಜೀವನದ ಬಾಗಿಲು ಲೇಖನಿಗೆ ತೆರೆಯುವುದೇ ಇಲ್ಲ. ಅಂದಿರುವ ಲಂಕೇಶರ ಈ ಮಾತುಗಳು ಶ್ರೀಮತಿ ಗೀತಾ ಅವರ ವಿಷಯದಲ್ಲಂತೂ ಅಕ್ಷರಶಃ ನಿಜವೆಂದೇ ಹೇಳಬೇಕು. ಏಕೆಂದರೆ ಶೋಷಿತರ ನೋವಿಗೆ ಸ್ಪಂದಿಸುವ, ನೊಂದವರಿಗೆ ನೆಮ್ಮದಿಯ ನುಡಿ ಸಾಂತ್ವನ ಹೇಳುವ, ಅಬಲೆಯರಿಗೆ ಸಬಲತೆಯ ಕಿಚ್ಚು ತುಂಬುವ, ಅಸಹಾಯಕರಿಗೆ ಆಶ್ರಯದ ಅಭಯಹಸ್ತ ನೀಡುವ ಮತ್ತು ಬಲತ್ಕಾರ, ದೌರ್ಜನ್ಯಗಳಿಗೆ ಬಲಿಯಾಗಿ, ಬಸಿಯುಸಿರಿಂದ ಬಿಕ್ಕುವವರ ಬೆನ್ನಿಗೆ ಗುದ್ದಿ, ಬಡಿದೆಬ್ಬಿಸಿ, ಬಂಡೆದ್ದು ಬಲ ಪ್ರದರ್ಶಿಸುವ ಅಗಣಿತ ಪಾತ್ರಗಳು ಅನೇಕ ಕತೆಗಳಲ್ಲಿ ಹಸಿ ಹಸಿಯಾಗಿ ಚಿತ್ರಿಸಿದ್ದಾರೆ ಲೇಖಕಿ ಗೀತಾ ಅವರು. ಉದಾಹರಣೆಗಾಗಿ, ದೀಪಾವಳಿ ವಿಶೇಷಾಂಕದಲ್ಲಿ ಪ್ರಕಟವಾಗಿರುವ ಬಂಜೆಂಬ ಶಬುದ ಹೊರಲಾರೆ ಕತೆಯ ಕೆಲವು ಸಂಭಾಷಣೆಗಳು : ಗೌಡನು ಮಗಳು ಪಾರ್ವತಿ ಕೆಂಪಂಚಿನ ದಟ್ಟ ಹಸುರಿನ ಚೌಕಳಿಯ ಇಳಕಲ್ ಸೀರೆ ಉಟ್ಟು, ರಕ್ತ ಕೆಂಪಗಿನ ಗುಳೇದಗುಡ್ಡದ ಕುಪ್ಪಸ ತೊಟ್ಟು ಅನ್ನುವ ಅವಳ ಉಡುಗೆ-ತೊಡುಗೆಯಿಂದಲೇ ಆರಂಭವಾಗುವ ಪಕ್ಕಾ ಪ್ರಾದೇಶಿಕತೆ ಮುಂದುವರಿದು ಆ ಪಾತ್ರದ ಮಾತುಗಳಲ್ಲಿಯೂ ಅಪ್ಪಟ ಆಡು ಮಾತು ಹೀಗೆ ಮೂಡಿ ಬಂದಿವೆ., ಕಣಕ್ಕೆ ದಾನ ಬೇಡಲು ಬಂದ ಶಾಣಪ್ಪ ಮುತ್ಯಾನನ್ನು ಕುರಿತು ಪಾರ್ವತಿ..,

ಶ್ಯಾಣಪ್ಪ ಮುತ್ಯಾ...ಒಂದು ಮರ ಜ್ವಾಳಾ ನಿನ್ನ ಹೊಟ್ಟಿಗಿ. ಇಗಾ ನನ್ನ ಕಡಿಂದ ಇನ್ನೊಂದು ಮರ ಜ್ವಾಳಾ ನಿನ್ನ ಬೀಡಿ ಗಟ್ಟಕ್ಕ ಎಂದು

ಹೇಳುತ್ತಾಳೆ. ಎಲ್ಲವೂ ನಮ್ಮ ಗ್ರಾಮೀಣ ಪ್ರದೇಶದ ಜನರು ಬಳಸುವ ಸಹಜ ನುಡಿಗಳೇ.

ಕಟುಗೊಂಡಂವಾ ನಡುಮಧ್ಯಾಣದಾಗೇ ಕೈ ಬಿಟ್ಟು ಕಣ್ಣುಚ್ಚಿದ. ಇದ್ದೊಂದು ಮಗನ ಮ್ಯಾಲ ತಪಾಗಳದನೇ ನಾನು ಶಿವಮ್ಮಕ್ಕಾ.., ಒಂದಕ್ಕ ಹತ್ತಾಗ್ತಾವ.. ನಮ್ಮ ಮನಿತನಾ ಹೊಳಿ ದಂಡ್ಯಾಗಿನ ಕರಕಿ ಬೇರಿನ್ಹಾಂಗ ಹಬ್ಬತಾದ, ಅಂತ ತಿಳ್ಕೊಂಡ್ರ ಹಿಂಗಾಯ್ತು ನೋಡು. ಮಗನ ಮದ್ವಿಆಗಿ ನಾಕೊರ್ಸಾದ್ರೂ ಮನ್ಯಾಗ ಒಂದು ಕೂಸಿನ ಅಳು ಕೇಳಲಿಲ್ಲ, ನಗು ಕೇಳಲಿಲ್ಲ. ನನಗಾ ಹಿಂತಾ ಗೊಡ್ಡು ಸೊಸಿ ಗಂಟು ಬಿತ್ತು.

ಇದೇ ಕತೆಯ ಈ ಸಂಭಾಷಣೆಯಲ್ಲಿ ಲೇಖಕಿ ಎಂತಹ ಅದ್ಭುತವಾದ ಉಪಮೆಗಳನ್ನು ಬಳಸಿದ್ದಾರೆನ್ನುವುದು ಗೋಚರ ವಾಗುತ್ತದೆ. ಗಂಡ ಅನ್ನುವದಕ್ಕೆ ಪರ್ಯಾಯವಾಗಿ ಕಟಗೊಂಡವ, ಅಕಾಲಿಕ ಅನ್ನುವದಕ್ಕೆ ನಡುಮಧ್ಯಾಣ, ಭರವಸೆಗೆ ತಪಾಗಳದೀನಿ, ಮನೆ ತುಂಬ ಮಕ್ಕಳು ಅನ್ನುವದಕ್ಕೆ ಕರಕಿ ಬೇರಿನ್ಹಂಗ ಹಬ್ಬತಾವ, ಬಂಜೆ ಅನ್ನುವಲ್ಲಿ ಗೊಡ್ಡು ಸೊಸೆ ಹೀಗೆ ಈ ಎಲ್ಲ ಸಾಲುಗಳು ಒಬ್ಬ ಓದುಗ ಓದುವಾಗ ನಮ್ಮ ಹಳ್ಳಿಯ ಪಾತ್ರಗಳೇ ಜೀವ ತಳೆದು ಓದುಗನೆದರು ಅನಾವರಣಗೊಂಡಂತೆ ಭಾಸವಾಗುತ್ತದೆ. .. ಹೀಗಾಗಬೇಕು ಕೂಡ. ಏಕೆಂದರೆ ಒಂದು ಕತೆಯ ವಸ್ತು, ಪರಿಸರ, ಭೌಗೋಳಿಕ, ಸಾಮಾಜಿಕ ಚಿತ್ರಣ, ಊಟ, ಉಡುಗೆ, ತೊಡುಗೆ, ಎಲ್ಲವೂ ಒಂದು ನಿಖರವಾದ ಪ್ರದೇಶವನ್ನು ಪ್ರತಿನಿಧಿಸುವ ಸಂದರ್ಭದಲ್ಲಿ ಪಾತ್ರಗಳ ಮಾತುಗಳು ಸಹ ಅತ್ಯಂತ ಮಹತ್ವ ಪಡೆದುಕೊಳ್ಳುವದರಿಂದ ಪ್ರಾದೇಶಿಕ ಭಾಷೆಯೂ ತಾನೇ ತಾನಾಗಿ ತೆರೆದುಕೊಳ್ಳುವುದು ಶ್ರೀಮತಿ ಗೀತಾ ಅವರ ಕತೆಗಳಲ್ಲಿ.

ಲೇಖಕರಾದವರು ಪಾತ್ರಗಳು ಮಿಂಚಲಿ, ಮರೆಯಲಿ ಎಂದು ಭಾವಿಸುವುದು ಬಹಳ ಅಪರೂಪ. ನೊಂದ ಶೋಷಿತ, ಅಸಹಾಯಕ ಪಾತ್ರಗಳು ಹಾಗೂ ಅವುಗಳ ದನಿ ತಾನೇ ಹೊರಡುತ್ತದೆ.

ಒಂದೆಡೆ ಲೇಖಕಿ ಶ್ರೀಮತಿ ಗೀತಾ ಅವರು ಬರೀತಾರೆ... ನನ್ನ ಮಗನ ಕೈ ಗುಣಾನೇ ಹಂತದ್ದವಾ. ಅಂವ ಬಿತ್ತಿದ ಬೀಜಾ ಒಂದನೂ ಹುಸಿ ಹೋಗಿಲ್ಲ. ಅದರ ಈ ಹೆಣ್ತಿಹೊಟ್ಟ್ಯಾಗ ಬಿತ್ತಿದ ಬೀಜಗೊಳೇ ಹುಸಿ ಆಗಲಕತ್ತಾವಲ್ಲ ಅಂತ ಚಿಂತ್ಯಾಗ್ಯಾದವ್ವನನಗ. ಎಂದು ಇದೇ ಸಂದರ್ಭದಲ್ಲಿ ದೇವನೂರು ಮಹಾದೇವರ ಒಡಲಾಳದ ಒಂದು ಸಂಭಾಷಣೆಯನ್ನು ನಾನಿಲ್ಲಿ ಉಲ್ಲೇಖಿಸಲು ಇಷ್ಟಪಡುತ್ತೇನೆ; ಶಾಲೆಯಿಂದ ಮನೆಗೆ ಬಂದ ಮೊಮ್ಮಗಳು ಪುಟಗೌರಿ, ತಾನು ಬರೆದ ನವಿಲಿನ ಚಿತ್ರ ಹೇಗಿದೆ ನೋಡು ಎಂದು ತನ್ನ ಅಜ್ಜಿಯಲ್ಲಿ ಕೇಳಿಕೊಂಡಾಗ ಸಾಕವ್ವ ಅತ್ಯಂತ ಸಹಜವಾಗಿಯೇ ಮೊಮ್ಮಗಳನ್ನು ಕುರಿತು ಹೇಳ್ತಾಳೆ .....:

ತಗಾ ಅದ್ಯಾರೋ ಒಬ್ಬಳು, ಕುಟ್ಟೋ ಭತ್ತ ಬುಟ್ಟು ಹುಟ್ಟೋ ಶ್ಯಾಟ ನೋಡ್ಕಂತಿದ್ಲಂತೆ ಎಂದು.

ಇಂತಹ ಸಂಭಾಷಣೆಗಳು ಮಡಿವಂತ ಓದುಗರಲ್ಲಿ ಮುಜುಗುರ ಉಂಟುಮಾಡಬಹುದು, ಬೇಸರವೂ ತರಿಸಬಹುದು.ಆದರೆ ಎಂತಹ ಪರಿಸರದಲ್ಲಿ ಯಾವ ವ್ಯಕ್ತಿ ಈ ಮಾತು ಹೇಳುತ್ತಿದ್ದಾನೆ ಅಥವಾ ಹೇಳುತ್ತಿದ್ದಾಳೆ ಅನ್ನುವ ವಾಸ್ತವತೆಯ ಅರಿವಾದಾಗ ಎಲ್ಲವೂ ಸಹಜವೆನ್ನಿಸದಿರದು. ಮನೆಯಲ್ಲಿ ರಾಶಿ ರಾಶಿ ಕೆಲಸವಿರುವಾಗ ಮೊಮ್ಮಗಳ ನವಿಲಿನ ಚಿತ್ರ ಸಾಕವ್ವನಿಗೆ ಮುಖ್ಯವೇ ಅಲ್ಲ. ಅಂತೆಯೇ ಸಹಜವಾಗಿ ಈ ಮಾತು ಹೇಳುತ್ತಾಳೆ. ಶ್ರೀಮತಿ ಗೀತಾ ಅವರ ಕತೆಯ ಸಂದರ್ಭದಲ್ಲಿಯೂ ಅಷ್ಟೇ. ತಾಯಿಯ ದೃಷ್ಟಿಯಲ್ಲಿ ತನ್ನ ಮಗನೇನೋ ಪುರುಷಸಿಂಹನೇ. ಆದರೆ ತನ್ನ ಸೊಸೆ ಮಾತ್ರ ಬಂಜೆ ಅನ್ನುವ ತಾತ್ಸರ.

ಎಲ್ಲ ಭಾಗಗಳಲ್ಲಿಯೂ ಆಯಾ ಪ್ರಾದೇಶಿಕ ಭಾಷೆಗಳೊಂದಿಗೇ ಆ ಭಾಗದ ನೆರೆಯ ಭಾಷೆಗಳ ಅನೇಕ ಪದಗಳು, ನುಡಿನುಟ್ಟುಗಳು ನಮ್ಮವೇ ಅನ್ನುವಷ್ಟರ ಮಟ್ಟಿಗೆ ನಮ್ಮೆಲ್ಲರ ದೈನಂದಿನ ಕಲಾಪಗಳಲ್ಲಿ ಕಲೆತು, ಬೆರೆತು ಒಂದಾಗಿ ಮಿಳಿತವಾಗುತ್ತವೆ. ಉದಾಹರಣೆಗೆ ಹೈದರಾಬಾದ್ ಕರ್ನಾಟಕ ಪ್ರದೇಶದ ಕನ್ನಡದಲ್ಲಿ ಹಾಸು ಹೊಕ್ಕಾಗಿರುವ ಉರ್ದು ಮತ್ತು ಮರಾಠಿ ಪದಗಳು. ಯಾರೋ ಟೈಂ ಎಷ್ಟು? ಅಂತ ಕೇಳಿದರೆ ಥಟ್ಟನೆ ಬರುವ ಉತ್ತರ, ಸಾಡೇಗ್ಯಾರಾ ಅಥವಾ ಸಾಡೇಅಖರಾ ಎಂದು. ಜೊತೆಗೇ ಹನ್ನೊಂದುವರೇ ಎಂದೂ ಹೇಳುವವರೂ ಇಲ್ಲದಿಲ್ಲ. ತುಮ್ ಕಾಲಿ ಹೈ ತೋ ಕಾ ಹುವಾ ದಿಲ ವಾಲೀ ಹೋ .., ಹಮ್‌ಕೋ...ಹಮಕೋ...ಭೀ ಏಕ್ ಚಾನಸ್ ದೋ..ಪೋರಗಿ ಫಸಲಿಗ್...ಫಸಲೀ... ಅನ್ನುವ ಶ್ರೀಮತಿ ಗೀತಾ ಅವರ ಹಿಂದೀ, ಉರ್ದು, ಬೀದರ ಭಾಷೆ ಮಿಶ್ರಿತ ಸಂಭಾಷಣೆ ಅವರ ಮೂಡಿ ಬರ್‍ತಾನ ಚಂದ್ರಾಮ ನೋಡ.. ಕತೆಯಲ್ಲಿ ಓದುತ್ತೇವೆ. ಹಾಗೆಯೇ, ನಾವಿಬ್ರೂ ಹೇಳಿ ಕೇಳಿ ಲಾವಾರಿಸಗೋಳು; ಇದರಾಗ ನಂದೇನು ನಿನ್ನ ಮ್ಯಾಲ ಜೋರಿ ಜಬರದಸ್ತಿಯವಾದನೂ ಬಿಲ್‌ಕುಲ್ ಇಲ್ಲ; ನನ್ನ ಮ್ಯಾಲ ಭರೋಸಾ ಇಡು ; ದವಾಖಾನಿ ಮುಂದಿನ ಲಂಗಾ, ಲಫಂಗ ಗಂಡುಗೋಳು ನಿನ್ನ ಇಜ್ಜತಕ ಕೈ ಹಾಕತಿದ್ದರು ಎಂಬ ಮಾತುಗಳು.

ಈ ಮೇಲಿನ ಸಂಭಾಷಣೆಯ ಎಲ್ಲ ತುಣುಕುಗಳೂ ಶ್ರೀಮತಿ ಗೀತಾ ಅವರ ಮೂಡಿ ಬರ್‍ತಾನ ಚಂದ್ರಾಮ ನೊಡ.. ಕತೆಯಿಂದಲೇ ಆರಿಸಿಕೊಂಡಿದ್ದೇನೆ. ಈ ಭಾಗದ ಅನ್ಯ ಭಾಷೆಗಳು ಕೂಡ ನಮ್ಮ ಆಡುಮಾತುಗಳಲ್ಲಿ ಆಳಕ್ಕೆ ಬೇರುಬಿಟ್ಟು ಕನ್ನಡದ ಪದಗಳೇ ಆಗಿ ಹೋಗಿವೆ. ಲಾವಾರಿಸ್, ಬಿಲ್‌ಕುಲ್, ಜಬರದಸ್ತಿ, ಭರೋಸಾ, ದಾವಾಖಾನಿ, ಲಫಂಗ್ ಮತ್ತು ಇಜ್ಜತ್ ಇತ್ಯಾದಿ ಉರ್ದುಪದಗಳಿಗೆ ನಾವ್ಯಾರು ನಿಘಂಟು ತೆರೆದು ಅರ್ಥ ಹುಡುಕುವುದಿಲ್ಲ. ಅನಾಥ, ಖಂಡಿತ, ಒತ್ತಾಯ, ನಂಬಿಕೆ, ಆಸ್ಪತ್ರೆ, ಅಯೋಗ್ಯ ಮತ್ತು ಮಾರ್ಯಾದೆ ಅನ್ನುವ ಅಚ್ಚ ಕನ್ನಡ ಪದಗಳಿಗೆ ಸಮಾನ ಶಬ್ದಗಳಾಗಿ ನಾವೆಲ್ಲರೂ ಬಳಸುತ್ತಿದ್ದೇವೆ. ಹೀಗೆ ಅತ್ಯಂತ ಸಮರ್ಥ ರೀತಿಯ ಪ್ರಾದೇಶಿಕ ಭಾಷೆಯ ಬಳಕೆ ಶ್ರೀಮತಿ ಗೀತಾ ಅವರ ಬಹುತೇಕ ಕತೆಗಳಲ್ಲಿ ನಾವು ಓದಬಹುದಾಗಿದೆ. ಇಂತಹ ಭಾಷಾ ಬಳಕೆ ಲೇಖಕಿಯ ಲೇಖನಿಗೂ ಹಸಿ ಹಸಿಯಾದ ಚೈತನ್ಯ ತುಂಬುತ್ತಲೇ ಇರುವುದರೊಂದಿಗೆ ಅಮೂಲ್ಯವಾದ ಗ್ರಾಮೀಣ ಜನರ ಆಡುನುಡಿಗಳು ಕನ್ನಡ ನಿಘಂಟಿನಲ್ಲಿ ಇಲ್ಲದೆಯೂ, ನಾಲಿಗೆಯಿಂದ ನಾಲಿಗೆಯ ಮೂಲಕ ಜೀವಂತವಾಗಿರಲು ಶಕ್ಯವಿದೆ. ಇಂತಹ ಸ್ತುತ್ಯರ್ಹ ಸಾಹಿತ್ಯ ರಚನೆ ಲೇಖಕಿ ಶ್ರೀಮತಿ ಗೀತಾ ಅವರ ಲೇಖನಿಯ ಮೂಲಕ ಆಗುತ್ತಿರುವುದು ಮೆಚ್ಚುವಂಥದ್ದೇ.

ಶ್ರೀಮತಿ ಗೀತಾ ನಾಗಭೂಷಣ ಅವರು ಕಲಬುರ್ಗಿ ಪ್ರಾಂತ್ಯದ ಹಳ್ಳಿಗಳನ್ನು ಹತ್ತಿರದಿಂದ ಕಂಡಿದ್ದಾರೆ. ಹಳ್ಳಿ ಮಂದಿಯ ಬದುಕಿನೊಂದಿಗೆ ಮುದದಿಂದ ಬೆರೆತಿದ್ದಾರೆ. ಬದುಕು-ಬವಣೆ, ನೋವು-ನಲಿವು, ಆಚಾರ-ವಿಚಾರ, ಪ್ರೀತಿ-ಹಾದರ,ಶಾಂತಿ -ಕಲಹ ಎಲ್ಲವನ್ನೂ ತಮ್ಮ ಲೇಖನಿಗೆ ವಸ್ತುವಾಗಿಸಿದ್ದಾರೆ. ನೊಂದವರಿಗೆ ಸಾಂತ್ವನ ಹೇಳಿದ್ದಾರೆ. ತುಳಿತಕ್ಕೊಳಗಾದವರ ತೊಡೆ, ತೋಳಿಗೆ ಶಕ್ತಿಯಾಗಿದ್ದಾರೆ. ಹೀಗಾದ್ದರಿಂದಲೇ ಬಂಡಾಯ ಧೋರಣೆಯ ಅನೇಕ ಕತೆಗಳು ಇವರು ಬರೆಯಲು ಸಾಧ್ಯವಾಗಿದೆ. ಇಲ್ಲಿಯೂ ಕೂಡ ಶ್ರೀಮತಿ ಗೀತಾ ಅವರು ಪ್ರಾದೇಶಿಕ ಭಾಷೆಯಿಂದ ಒಂದಿಂಚೂ ದೂರ ಸರಿದವರೇ ಅಲ್ಲ. ಎಲ್ಲ ಪರಿಸರ, ಪಾತ್ರ, ಮಾತುಕತೆ, ಹಾಡು, ಘೋಷಣೆಗಳೆಲ್ಲವೂ ಪ್ರಾದೇಶಿಕ ಭಾಷೆಯಲ್ಲಿಯೇ ಇರುವುದು ನಾವು ನೋಡಬಹುದಾಗಿದೆ. ಅಷ್ಟೇ ಏಕೆ, ಚಾರಿತ್ರಿಕ ದಾಖಲೆಯಾಗುಳಿಯುವ, ಪ್ರದೇಶವನ್ನು ಪ್ರತಿನಿಧಿಸುವ ಸ್ಥಳಗಳನ್ನೂ ಯಥೇಚ್ಛವಾಗಿ ಲೇಖಕಿ ಅನೇಕ ಕತೆಗಳಲ್ಲಿ ಬಳಸಿಕೊಂಡಿದ್ದಾರೆ. ಉದಾಹರಣೆಗೆ ಬ್ರಹ್ಮಪುರ, ಮಕ್ತಂಪೂರ, ಲಾಲಗೇರಿ, ಧನಗರ ಗಲ್ಲಿ, ಶಾಹಬಜಾರ, ಗಂಜ್, ಮಿಲ್, ರೈಲ್ವೆ ಸ್ಟೇಷನ್, ತಿಮ್ಮಾಪುರಿ ಚೌಕ, ರೋಜಾ, ರಾಘವೇಂದ್ರಕಾಲೋನಿ, ಗಂಗಾನಗರ ಝೋಪಡಿಪಟ್ಟಿ, ಚೋಮ ನಗರ ಝೋಪಡಪಟ್ಟಿ, ಕಿಲ್ಲೆ ಝೋಪಡಪಟ್ಟಿ ಇತ್ಯಾದಿ.

ಸಾವಿರೊರ್ಸಿನ ನಿದ್ದಿ ತೊರದೇಳ್ರೀ...
ಸಾಕಿನ್ನ ಮಲಗಿದ್ದು ಎದ್ದೇಳ್ರೀ..
ಬಳಿ ಮಂದಿ, ಬಿಳಿ ಹಂದಿ, ಕೆಂಪಿರುವು ಕಡಿತಾವು
ಸಮಜಾಯಿಸಿ ಒಪ್ಪಂದ ಬ್ಯಾಡ ನಮಗ
ನಂಬಿ ಕುತ್ತಿಗಿ ಕೊಟ್ಟು ಕೆಟ್ಟವಿ..
ಇನ್‌ಮುಂದ ಕುಡಿಗೋಲು ಹಿಡ್ಕೊಂಡು ಎದ್ದೇಳ್ರೀ...

ಮತ್ತೇ ಅದೇ ಕತೆಯೇ ಸಂಭಾಷಣೆ ಓದುವಾಗ ಲೇಖಕಿಯ ಬಂಡಾಯ ಧೋರಣೆ ವ್ಯಕ್ತವಾಗುತ್ತದೆ. ಎಲ್ಲ ಘೋಷಣೆಗಳೇ, ಆದರೆಲ್ಲೂ ಗ್ರಾಂಥಿಕ ಭಾಷೆಯ ನೆರಳಿಲ್ಲ.

ಒಬ್ಬ ಸುಶಿಕ್ಷಿತ ದಲಿತ ಅಧಿಕಾರಿ ಇನ್ನೊಬ್ಬ ಸುಶಿಕ್ಷಿತ ದಲಿತ ಯುವಕನನ್ನು ವಾಸ್ತವದತ್ತ ಎಳೆತರುವ, ಸಾಮಾಜಿಕ ಸಮಾನತೆಗಾಗಿ ಹೋರಾಡುವ ಕೈಂಕರ್ಯ ಒದಗಿಸುವ ಕೆಲಸ ನಡೆಯುತ್ತದೆ. ಶ್ರೀಮತಿ ಗೀತಾ ಅವರ ಪುಂಡಿ ಪೂಜಾರಿಯಾದಾಗ ಕತೆಯಲ್ಲಿ ಹಳ್ಳಿಯ ಒಬ್ಬ ದಲಿತ ಯುವಕ ಯಾವುದೇ ಆಡಂಬರ ಇಲ್ಲದೇ ಎಷ್ಟು ಸಹಜವಾಗಿ ತನ್ನ ಆಡು ಭಾಷೆಯಲ್ಲಿಯೇ ಮಾತನಾಡುತ್ತಾನೆ. ಅನ್ನುವುದನ್ನು ಈ ಸಂಭಾಷಣೆಯ ಮೂಲಕ ತಿಳಿದು ಕೊಳ್ಳಬಹುದಾದ ತೋಬಾ ...ತೋಬಾರ್ರೀ... ಸಾಹೇಬ್ರ... ಹೀಗಂದು ನನಗ ಪಾಪದಾಗ ಹಾಕಬ್ಯಾಡ್ರಿ. ನಾನಂತೂ ಹೇಳಿ ಕೇಳಿ ಹೊಲ್ಯಾ. ದಿನ ಬೆಳಗಾದ್ರ ಖಂಡಾ ತಿಂದು, ಸಿಂದಿ ಕುಡ್ದು, ರಾತ್ರಿಯೆಲ್ಲ ಮೈಲಿಗಿಯಾಗೋ ಕಮ್ಮಜಾತಿಯಂವಾ, ಆ ಮಾತಾಯಿ ಮಹಾಲಕ್ಷ್ಮಿ ಪುಜಾಕ್ಕ ನಾ ಯೋಗ್ಯ ಅಲ್ರೀ. ಈ ಕತೆಯಲ್ಲೂ ಸವರ್ಣೀಯರು ಮತ್ತು ದಲಿತರ ಮಧ್ಯ ಸಂಘರ್ಷ, ಹೋರಾಟ ನಡೆಯುತ್ತಿದೆ. ಬಂಡಾಯ ಈ ಕತೆಯಲ್ಲೂ ಮೆರೆಯುತ್ತಿದೆ.

ಸೂಕ್ಷ್ಮ ಸಂವೇದನೆಯ, ಮಿತಭಾಷಿ, ಸೌಮ್ಯ ನಿಲುವಿನ, ಶಾಂತ ಮನಸ್ಸಿನ ಕತೆಗಾರ್ತಿ ಶ್ರೀಮತಿ ಗೀತಾ ಅವರು ಅದೆಲ್ಲಿ, ಯಾವಾಗ, ಯಾರು, ಯಾರಿಗೆ ಬೈಯ್ಯುವದನ್ನು ಕೇಳಿಸಿಕೊಂಡರೋ, ತಮ್ಮ ಅನೇಕ ಕತೆಗಳಲ್ಲಿ ಪ್ರಾದೇಶಿಕ ಭಾಷೆಯ ಪಕ್ಕಾ ಜವಾರಿ ಬೈಗುಳಗಳನ್ನು ಪಾತ್ರಗಳ ಮುಖಾಂತರ ಹೇಳಿಸುತ್ತಾರೆ. :

ಏಯ್ ಸುವ್ವರ್‌ಕೆ ಬಚ್ಚೇ... ಕಲ್ ಸೆ ತೇರಾ ದಂಧಾ ಇದರ ಮೇರೆ ಪಾಸ್ ನಹೀ. ನಾಳಿಗಿ ಇಲ್ಲಿಗೆ ಬಂದಿ ಅಂದ್ರ ನಿನಗೆ ಒದ್ದು ಓಡುಸ್ತಿನಿ, ತಿಳಿತೇನ್ಲೆ ಭಾಂಚೋದ್, ಅಂತ.

ಈ ಲೋಕವೆಲ್ಲ ಘೋರ ಕತೆಯ ಈ ಬೈಗುಳಗಳ ಚಂದದೊಂದಿಗೇ ಹಳ್ಳಿಯ ಬಡತನ ಬದುಕಿನ ಚಿತ್ರಣವು ಸೊಗಸಾಗಿ ಕೊಡುತ್ತಾರೆ ಲೇಖಕಿ ಶ್ರೀಮತಿ ಗೀತಾ ಅವರು.

ಕತ್ತಲು ಸತ್ತು ಬೆಳಗಾಯಿತು. ಲವಂಗಿ ಎದ್ದವಳೇ ಮಾರಿ ತೊಳ್ಕೊಂಡು, ಮನೆ ಕಸ ಹೊಡೆದಳು. ರಾತ್ರಿ ಉಂಡು ಖಾಲಿ ಮಾಡಿದ್ದ ಸಿಲಾವರಿನ ನೆಗ್ಗಿದ ಎರಡು ಬಗೋಣಿ, ಒಂದು ಗಿಂಡಿ, ತುಟಿ ಹರಕು ತೆಂಬಿಗಿ ಮತ್ತು ಎರಡು ನೆಗ್ಗಿ ಸೊಟ್ಟಗಾಗಿದ್ದ ತಾಟುಗಳನ್ನು ಬೂದಿ ಹಚ್ಚಿ ತಿಕ್ಕಿ ತೊಳೆದಳು. ಆಟೊತ್ತಿಗೆ ಎದ್ದು ಮಾರಿ ತೊಳ್ಕೊಂಡು ಬಂದ ಸಿದ್ದು; ಯವ್ವಾ... ಡಬಲ್ ರೊಟ್ಟಿ ತರ್‍ರೀನಂತ ಚಾ ಕಾಸಲಿಕ್ಕಿಡೆ ಅಂತಂದು ಹೊರಗೋಡಿದ. ಇಲ್ಲಿ ಒಬ್ಬ ಬಡವನ ನೈಜ ಚಿತ್ರಣ ಕಣ್ಣಿಗೆ ಕಟ್ಟುವಂತಿರುವುದು ನಾವು ಕಾಣುತ್ತೇವೆ.

ಹೀಗೆ ಶ್ರೀಮತಿ ಗೀತಾ ನಾಗಭೂಷಣ ಅವರು ದುರಂತ, ವಾಸ್ತವ, ಚಕ್ಕರಕಟ್ಟಾ ಚೌಕ್, ಐಬು, ಮಾನಾಪಮಾನ ನಿಮ್ಮದಯ್ಯ, ಮತ್ತು ಗೂಡಿನೊಳಗಿನ ಗುಟ್ಟು ಮೊದಲಾದ ಅನೇಕ ಕತೆಗಳಲ್ಲೂ ಪುಂಖಾನುಪುಂಖವಾಗಿ ಕಲಬುರ್ಗಿ ಜಿಲ್ಲೆಯ ಪ್ರಾದೇಶಿಕ ಭಾಷೆಯ ಬಳಕೆ ಆಗಿರುವುದು ನಾವು ಕಾಣುತ್ತೇವೆ.

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಅನೇಕ ಚಳುವಳಿಗಳನ್ನು ನಾವು ನೋಡುತ್ತೇವೆ. ನವೋದಯಪೂರ್ವ, ನವೋದಯ, ನವ್ಯ,ದಲಿತ, ಬಂಡಾಯ ಇತ್ಯಾದಿ. ಯಾವುದೇ ಚಳುವಳಿ ಆಗಿರಲಿ ನಿತ್ಯ ನಿರಂತರ ಶಾಶ್ವತವಲ್ಲ. ಆಯಾ ಸಂದರ್ಭಗಳಲ್ಲಿ ಒಂದು ಹಂತದವರೆಗೆ ಅಥವಾ ಕಾವು ಆರುವವರೆಗೆ ಸಕ್ರಿಯವಾಗಿದ್ದು ಅನಂತರ ನಿಷ್ಕ್ರಿಯವಾಗಿಬಿಡುವುದು ಸಹಜ. ಹಾಗೇನೇ ನಮ್ಮ ಸಾಹಿತ್ಯದ ಚಳುವಳಿಗಳೂ ಹಳೆಯದರ ಬೆನ್ನ ಮೇಲೆ ಸಾಗಿ ಹೊಸತರ ಶೋಧದತ್ತ ಮುಖ ಮಾಡಿ ಮುನ್ನಡೆಯುತ್ತಿವೆ. ಒಂದು ಕಾಲದಲ್ಲಿ ಅತ್ಯಂತ ಕ್ರಿಯಾಶೀಲವಾಗಿದ್ದ ದಲಿತ ಚಳವಳಿ ಮುಂದೆಯೂ ಅದೇ ಬಿಸಿ, ಬಿಗು ಉಳಿಸಿಕೊಳ್ಳುವಲ್ಲಿ ವಿಫಲವಾಯಿತೇನೋ ಅನ್ನಿಸುತ್ತದೆ. ಇದೇ ರೀತಿ ಬಂಡಾಯ ಚಳುವಳಿ ಕೂಡ. ಒಂದು ಕಾಲವಿತ್ತು, ಕನ್ನಡದ ನೆಲದ ತುಂಬ ಬಂಡಾಯ ಪ್ರತಿಧ್ವನಿಸುತ್ತಿತ್ತು. ಆ ಕಾಲ ಘಟ್ಟದಲ್ಲಿ ಬರಗೂರು, ಲಂಕೇಶ, ಚಂಪಾ, ಚೆನ್ನಣ್ಣ ಸಬರದ, ಲಲಿತಾ ನಾಯಕ, ಸಾರಾ, ಭಾನು ಮುಷ್ತಾಕ್, ಸಿದ್ದಲಿಂಗಯ್ಯ, ಹನುಂತಯ್ಯ, ಸಿದ್ದನಗೌಡ, ಗೀತಾ ನಾಗಭೂಷಣ ಮೊದಲಾದವರೆಲ್ಲರೂ ಬಂಡಾಯ ಸಾಹಿತ್ಯ ರಚಿಸಿದರು, ಸಮ್ಮೇಳನ, ಜಾಥಾ, ಹೋರಾಟ ನಡೆಸಿದರು. ಯಥಾ ಪ್ರಕಾರ ಮುಂದೊಂದು ದಿನ ಬಂಡಾಯದ ಬಿಸಿಯೂ ತಣ್ಣಗಾಗತೊಡಗಿತು. ಬಂಡಾಯ ಅನ್ನುವುದು ಬರೀ

ಘೋಷಣೆಯಾಗುತ್ತಿದೆ ಅನ್ನುವ ಕೂಗೂ ಕೇಳಿ ತೊಡಗಿತು. ಬಂಡಾಯದಿಂದ ಒಂದಿಷ್ಟು ಪರಿವರ್ತನೆ, ಬದಲಾವಣೆ ಆಗಿರುವುದೇನೋ ನಿಜವೇ. ಆದರೆ ಶ್ರೀಮತಿ ಗೀತಾ ಅವರ ಬಹುತೇಕ ಕತೆಗಳು ಬಂಡಾಯ ಧೋರಣೆಯವುಗಳೇ ಆಗಿವೆ. ರಾಜಕೀಯ ಅಧಿಕಾರ ವಿಕೇಂದ್ರಿಕರಣದ ನಂತರವಂತೂ ಹಳ್ಳಿಗಳ ಗೌಡ ,ಕುಲಕರ್ಣಿ, ಸಾಹುಕಾರರ ಜಮಿನ್ದಾರಿ ಗತ್ತು, ಗಮ್ಮತ್ತು, ಅಟ್ಟಹಾಸ, ದೌರ್ಜನ್ಯಗಳ ದರ್ಬಾರು ನಿಂತು ಹೋದಂತೆಯೇ, ಆಗಿದೆ. ಆದರೆ ಈಗಲೂ ಶ್ರೀಮತಿ ಗೀತಾ ಅವರ ಅನೇಕ ಕತೆಗಳಲ್ಲಿ ಈ ಪಾತ್ರಗಳು ಮೆರೆಯುತ್ತಲೇ ಇರುವುದು ಸೋಜಿಗವೆನಿಸುತ್ತದೆ. ಹುಸಿ ಬಂಡಾಯವೇ ಅನ್ನುವ ಅನುಮಾನ ಉಂಟಾಗುತ್ತದೆ. ಬಂಡಾಯ ಮನೋಭಾವವೇ ಬರವಣಿಗೆಯ ಬಂಡವಾಳ ಆಗಲಾರದು. ಭಾಷಾ ಬಳಕೆಯ ಗಿಮಿಕ್ ಮಾತ್ರದಿಂದ ಗಟ್ಟಿ ದಾಖಲಾರ್ಹ ಸಾಹಿತ್ಯ ಸೃಷ್ಟಿಯಾಗಲಾರದು ಅನ್ನುವುದು ನನ್ನ ವೈಯಕ್ತಿಕ ಅಭಿಪ್ರಾಯ. ಇಂತಹ ಸತ್ಯ ಸಂಗತಿಯನ್ನು,ವಾಸ್ತವಾಂಶವನ್ನು, ಸೂಕ್ಷ್ಮ ಸಂವೇದನೆಯ ಲೇಖಕಿ ಮನಗಂಡಾರೆಂದು ಆಶಿಸುತ್ತೇನೆ.

ಸರಕಾರಿ ಸೇವೆಯಿಂದ ವಿಶ್ರಾಂತಿ ಪಡೆದು, ಆರು ದಶಕಗಳಿಗೂ ಅಧಿಕ ವಸಂತಗಳು ಕಂಡು ಪಕ್ವವಾಗಿರುವ ಕತೆಗಾರ್ತಿ ಶ್ರೀಮತಿ ಜಿ.ಗೀತಾ ನಾಗಭೂಷಣ ಅವರು ಈಗಲೂ ಏಕೆ ಪ್ರಚಲಿತ ವಿದ್ಯಮಾನಗಳತ್ತ ಗಮನಹರಿಸುತ್ತಿಲ್ಲ ಅನ್ನುವುದೇ ಸೋಜಿಗದ ಸಂಗತಿ ಆಗಿ ನನಗೆ ಕಾಡಿದೆ. ಮತ್ತೆ ಮತ್ತೇ ಪುನರಾವರ್ತನೆ ಆಗುವ ಅದೇ ಗ್ರಾಮೀಣ ಶೋಷಿತರ, ನೊಂದವರ, ಬದುಕೇ ಈಗಲೂ ಕಥೆಗೆ ವಸ್ತುವಾಗಿಸುತ್ತಿರುವುದು ಸರಿಯೇ ? ಎಲ್ಲಾ ವಿಧದ, ಎಲ್ಲಾ ವರ್ಗಗಳ, ಜನರೂ ಇದೇ ಸಮಾಜದಲ್ಲಿದ್ದಾರೆ. ಅನೇಕ ಸಮಸ್ಯೆ ಸಂಘರ್ಷ ಅವರ ಬದಕಲ್ಲೂ ನರ್ತಿಸುತ್ತವೆ. ಜಾಗತೀಕರಣ, ಖಾಸಗೀಕರಣ ಅನ್ನುವ ಮಹಾಮಾರಿ ಪ್ರಪಂಚದಾದ್ಯಂತ ಹರಡುತ್ತಿದೆ. ಬಹುರಾಷ್ಟ್ರೀಯ ಕಂಪನಿಗಳು ನಮ್ಮ ದೇಶೀಯ ಅತೀ ಸಣ್ಣ ಕಸುಬುದಾರರನ್ನು ಹರಿದು ತಿನ್ನುತ್ತಿವೆ. ಕುಂಬಾರನ ಮಡಿಕೆ, ಕುಂಬಾರನ ಕುಲುಮೆ, ಕೊರವನ ಚಾಪೆ, ಪೊರಕೆ, ಗಿಲಗಂಜಿ ಎಲ್ಲ ಮೂಲೆ ಸೇರಿ ಮರೆಯಾಗಿ ತುತ್ತಿನ ಚೀಲ ತುಂಬಿಸಿಕೊಳ್ಳಲು ಇವರೆಲ್ಲ ಏನೇನೋ ಆಗುತ್ತಿದ್ದಾರೆ. ಅರೆಹೊಟ್ಟೆಯಿಂದ ಬದುಕು ಸಾಗಿಸುತ್ತಿದ್ದಾರೆ. ರೈತ ಮುಗಿಲಿಗೆ ಮಾರಿ ಮಾಡಿ ಗಾಳಿ ಬಿಸಿಲುಂಡು ಉಸಿರಾಡುತ್ತಿದ್ದಾನೆ. ನೇಣಿಗೆ ಬಲಿಯಾಗುತ್ತಿದ್ದಾನೆ. ಕೋಲಾ-ಪೆಪ್ಸಿಗಳು, ಮಜ್ಜಿಗೆ, ಶರಬತ್ತನ್ನು ಮೆಟ್ಟ ನಿಂತಿವೆ. ಮಲ್ಟಿ ಚಾನಲ್‌ಗಳ ಅರೆಬೆತ್ತಲೆ ಪ್ರದರ್ಶನಗಳಿಂದ ಯುವ ಜನಾಂಗ ದನಗಳಂತಾಗುತ್ತಿದ್ದಾರೆ. ರಾಜಕೀಯ ದೊಂಬರಾಟದಿಂದ ದೇಶ ನಜ್ಜು ಗುಜ್ಜಾಗುತ್ತಿದೆ. ಇಂದಿನ ಹಸುಗೂಸುಗಳು ನಾಳೆಯ ಕರಾಳ ದಿನಗಳನ್ನು ಎದುರು ನೋಡುತ್ತಾ ತಲ್ಲಣ ಗೊಂಡು ತತ್ತರಿಸುವಂತಾಗಿದೆ. ಕೊಳ್ಳೆ ಹೊಡೆಯಲು ಬಂದವರಿಗೆ ನಮ್ಮದೆಲ್ಲವನ್ನು ಮಾರಿಕೊಳ್ಳುತ್ತ ಮತ್ತಷ್ಟು ದರಿದ್ರರಾಗುತ್ತಿದ್ದೇವೆ. ಇಲ್ಲಿದ್ದುದೆಲ್ಲ ಏನಾಯ್ತು? ಯಾರದೋ ಅನ್ಯರ ಪಾಲೇಕಾಯ್ತು? ಎಂದು ನಮ್ಮ ಮುಂದಿನ ಪೀಳಿಗೆ ಕೇಳಬಹುದಾದ ಪ್ರಶ್ನೆಗಳಿಗೆ ಉತ್ತರಿಸಲಾಗದಂತಹ ಉತ್ತರಭೂಪರಾಗಬೇಕಾದ ಪ್ರಮೇಯ ಎದುರಾಗುತ್ತಿದೆ. ತೃತೀಯ ಜಗತ್ತಿನ ರಾಷ್ಟ್ರಗಳು, ದೈತ್ಯ ಶಕ್ತಿಗಳ ಎದುರು ತಲ್ಲಣಗೊಂಡು ತತ್ತರಿಸುವಂತಾಗಿದೆ. ದೇಶಗಳೇ ದಿವಾಳಿಯಾಗುತ್ತಿವೆ. ಉದಾಹರಣೆಗೆ ಅರ್ಜಂಟೈನಾ, ಶ್ರೀ ಲಂಕಾ, ಪ್ಯಾಲಸ್ತೀನ್, ಅಫಘಾನಿಸ್ತಾನ್, ಇರಾಕ್ ಮೊದಲಾದವುಗಳು. ಈ ಎಲ್ಲ ವಿದ್ಯಮಾನಗಳೂ ಪ್ರಪಂಚದ ಎಲ್ಲ ಜೀವಿಗಳಿಗೂ ಸಂಬಂಧಿಸಿದವುಗಳೇ ಆಗಿರುವುದರಿಂದ ಇಂತಹ ವಿಷಯಗಳ ಕುರಿತೂ ಬರೆದು, ಬೆಳಕು ಚೆಲ್ಲಬೇಕಾದವರು ಲೇಖಕರೇ ಎಂದು ನಾನಂದುಕೊಂಡಿದ್ದೇನೆ. ನಮ್ಮದರ ಜೊತೆಗೇ ಇದೂ ನಮ್ಮದೇ ಎಂದು ತಿಳಿದು, ತಿಳಿದೇನೂ.. ನಮ್ಮದೇ ಆಗಿರುವುದರಿಂದ ಇದರತ್ತಲೂ ನಮ್ಮ ಅನುಭವಿ ಲೇಖಕಿ ಶ್ರೀಮತಿ ಗೀತಾ ನಾಗಭೂಷಣ ಅವರು ಗಮನ ಹರಿಸುತ್ತಾರೆ ಎಂದು ಆಶಿಸುತ್ತೇನೆ ಹಾಗೂ ಇದೆಲ್ಲವನ್ನೂ ಗ್ರಹಿಸಿ ಈ ದಿಶೆಯಲ್ಲೂ ಒಂದಿಷ್ಟು ಬರವಣಿಗೆ ಕನ್ನಡಿಗರಿಗೆ ನೀಡುತ್ತಾರೆ ಅನ್ನುವ ವಿಶ್ವಾಸ ನಾನೂ ಇರಿಸಿಕೊಳ್ಳುತ್ತೇನೆ.

- ಚಿತ್ರಶೇಖರ ಕಂಠಿ

(ಕೃಪೆ : ಹೊಸತು)

---

ಶರಣ ಪತಿ ಲಿಂಗ ಪತಿ ಎಂಬರು
ಶರಣರ ಹೆಣ್ಣಾದ ಪರಿಯಿನ್ನೆಂತು ?
ಲಿಂಗ ಗಂಡಾದ ಪರಿಯಿನ್ನೆಂತು
ನೀರು ನೀರು ಕೂಡಿ ಬೆರೆದಲ್ಲಿ, ಭೇದಿಸಿ ಬೇರೆ ಮಾಡಬಹುದೇ ?
ಗಂಡು ಹೆಣ್ಣು ಯೋಗವಾದಲ್ಲಿ ಆತುರ ಹಿಂಗಿ ಘಟ ಬೇರಾಯಿತ್ತು
ಇದು ಕಾರಣ
ಶರಣಸತಿ, ಲಿಂಗಪತಿ ಎಂಬ ಮಾತು ಮೊದಲಿಂಗೆ
ಮೋಸ, ಲಾಭಕ್ಕಧೀನವುಂಟೆ ? ಎಂದ ನಂಬಿಗ ಚೌಡಯ್ಯ.

★★★★★★

ದೇವನೊಬ್ಬ, ನಾಮ ಹಲವು
ಪರಮ ಪತಿವ್ರತೆಗೆ ಗಂಡನೊಬ್ಬ
ಮತ್ತೊಂದಕ್ಕೆರಗಿದಡೆ - ಮೂಗ ಕೊಯ್ವನು
ಹಲವು ದೈವದ ಎಂಜಲ ತಿಂಬವರನೇನೆಂಬೆ
ಕೂಡಲ ಸಂಗಮದೇವಾ

★★★★★★

# ಒಂದು ಹೊಸ ಧ್ವನಿ

- ಲಕ್ಷ್ಮೀ ಚಂದ್ರಶೇಖರ್

ಇಂದಿನ ಕನ್ನಡದ ಅತ್ಯಂತ ಜನಪ್ರಿಯ ನಾಟಕಕಾರರಲ್ಲೊಬ್ಬರಾದ ಡಾ॥ ಎಚ್.ಎಸ್.ವೆಂಕಟೇಶಮೂರ್ತಿಯವರು ರಾಮಾಯಣ, ಮಹಾಭಾರತ ಕಾವ್ಯಗಳ ವಸ್ತುವನ್ನಾಧರಿಸಿದ ಒಂದು ಸರಣಿ ನಾಟಕಗಳನ್ನು ರಚಿಸಿದ್ದಾರೆ. ಈ ನಾಟಕಗಳಲ್ಲಿ ಅವರು ಪುರಾಣ ಭಂಜನೆಯನ್ನು ಮಾಡುತ್ತಲೇ, ಮಹಾಕಾವ್ಯಗಳಲ್ಲಿ ಅಮುಖ್ಯರೆನಿಸಿ ಕೊಂಡ ಸ್ತ್ರೀ ಪಾತ್ರಗಳಿಗೆ ಧ್ವನಿ ನೀಡಿದ್ದಾರೆ. ಅದರಲ್ಲೂ ವಿಶೇಷವಾಗಿ ಮಹಾಕಾವ್ಯಗಳಲ್ಲಿ ಪ್ರಾಮುಖ್ಯತೆ ಪಡೆಯದ ಸ್ತ್ರೀಪಾತ್ರಗಳತ್ತ ವಿಶೇಷ ಗಮನಹರಿಸಿದ್ದಾರೆ. ಈ ರೀತಿ ಇವರು ರಚಿಸಿರುವ ಬಹುಪಾಲು ನಾಟಕಗಳು ಏಕ ಮಹಿಳಾ ಪಾತ್ರದ ನಾಟಕಗಳಾಗಿವೆ. ಮಹಾಕಾವ್ಯಗಳನ್ನು ನಿರ್ದಿಷ್ಟ ಮಹಿಳಾ ದೃಷ್ಟಿಕೋನದಿಂದ ವಿಮರ್ಶಿಸುವ ಪ್ರಯತ್ನಗಳಾಗಿವೆ. ಮಹಾಕಾವ್ಯಗಳು ಅಭಿವ್ಯಕ್ತಿಸುವ ಪುರುಷ ಸಂರಚನೆಯ ಗ್ರಹಿಕೆಗಳನ್ನು ಕುರಿತಂತೆ ಈ ಮಹಿಳಾ ಪಾತ್ರಗಳು ಪ್ರಶ್ನೆಗಳನ್ನು ಎತ್ತುತ್ತಲೇ ಅವರಿಗಾದ ಅನ್ಯಾಯವನ್ನು ಖಂಡಿಸುತ್ತವೆ. ಇತ್ತೀಚೆಗೆ ಪ್ರದರ್ಶನವಾದ 'ಊರ್ಮಿಳಾ' ರಾಮಾಯಣದ ವಸ್ತುವನ್ನಾಧರಿಸಿದ ಏಕವ್ಯಕ್ತಿ ಪ್ರದರ್ಶನ.

ಮೈಸೂರಿನ ರಂಗಾಯಣದಲ್ಲಿ ನಟಿಯಾಗಿದ್ದ ಎನ್. ಮಂಗಳ ಈ ನಾಟಕವನ್ನು ನಿರ್ದೇಶಿಸಿ ಸ್ವತಃ ಅಭಿನಯಿಸಿದ್ದಾರೆ. ಈ ಪ್ರದರ್ಶನದಿಂದ ನಾಟಕ ಆಗಿದೆ. ಈ ವೇದಿಕೆಯ ಮೂಲಕ ರಂಗಭೂಮಿಯ ಮೇಲೆ ಅವರು ನಟನೆ, ನಿರ್ದೇಶನ, ಮತ್ತು ರಂಗಸಜ್ಜಿಕೆಯ ಕ್ಷೇತ್ರದಲ್ಲಿ ಗಳಿಸಿಕೊಂಡ ಅನುಭವವನ್ನು ಮೆಲಕು ಹಾಕುತ್ತ ಹೊಸ ಅನುಭವಗಳಿಗೆ ತೆರೆದುಕೊಳ್ಳಬೇಕೆನ್ನುವ, ಹೊಸ ಸಾಧನೆಗಳತ್ತ ಹೆಜ್ಜೆ ಹಾಕಬೇಕೆನ್ನುವ ದಿಕ್ಕಿನತ್ತ ಹೆಜ್ಜೆ ಹಾಕಿದ್ದಾರೆ.

**ಹೊಸ ಬೆಳಕಿನಲ್ಲಿ**

ಗಂಡ ರಾಮನನ್ನು ಒತ್ತಾಯಿಸಿ ತಾನೂ ಕಾಡಿಗೆ ಹೊರಟ ಸೀತೆ, ಮತ್ತು ಅವರ ಬೆಂಗಾವಲಿಗೆಂದು ಲಕ್ಷ್ಮಣನೂ ತೆರಳಿದ ನಂತರ ಅರಮನೆಯಲ್ಲೇ ಉಳಿದ ನವ ವಧು ಊರ್ಮಿಳೆ ಹದಿನಾಲ್ಕು ವರ್ಷಗಳ ದೀರ್ಘ ಅವಧಿಯನ್ನು ಗಂಡನಿಲ್ಲದೆ ಕಳೆಯುತ್ತಾಳೆ. ಅವಳ ವೇದನೆ ಮತ್ತು ತ್ಯಾಗವನ್ನು ವೈಭವೀಕರಿಸುವ ವಾಲ್ಮೀಕಿ ಭಾವನಾರಹಿತನಾದ ಲಕ್ಷ್ಮಣನ ಪಾತ್ರದ ಶೌರ್ಯವನ್ನು ವೈಭವೀ ಕರಿಸುತ್ತಾನೆ.

ಡಾ॥ ಎಚ್. ಎಸ್. ವೆಂಕಟೇಶಮೂರ್ತಿಯವರು ಇದಕ್ಕೆ ವ್ಯತಿರಿಕ್ತವಾಗಿ ಊರ್ಮಿಳೆಯ ಪಾತ್ರವನ್ನು ಕೇಂದ್ರವಾಗಿರಿಸಿ ಲಕ್ಷ್ಮಣನ ದೌರ್ಬಲ್ಯಗಳನ್ನು ಪ್ರಶ್ನಿಸುವಂತೆ ಮಾಡಿದ್ದಾರೆ. ತನ್ನನ್ನು ಮತ್ತು ತನ್ನ ಹೆಂಡತಿಯನ್ನು ರಕ್ಷಿಸಿಕೊಳ್ಳಬಲ್ಲ ಸಾಮರ್ಥ್ಯ ಅಣ್ಣ ರಾಮನಿಗಿದ್ದರೂ, ಲಕ್ಮಣ ಅವರ ಬೆಂಗಾವಲಿಗೆ ಹೊರಟದ್ದು ಎಷ್ಟು ಸರಿ ? ವಯಸ್ಸಾದ ತಂದೆ ತಾಯಿಗಳ ರಕ್ಷಣೆ ಮತ್ತು ಹೊಸದಾಗಿ ಮದುವೆಯಾದ ಹೆಂಡತಿಯ ಬಗೆಗಿನ ಕರ್ತವ್ಯಗಳನ್ನು ತ್ಯಜಿಸಿ ರಾಮನ ಹಿಂದೆ ಹೋದುದರ ಅಗತ್ಯದ ಬಗ್ಗೆ ಊರ್ಮಿಳಾ ಪ್ರಶ್ನಿಸುತ್ತಾಳೆ. ಈ ಸಂದರ್ಭದಲ್ಲಿ ನಾಟಕಕಾರರು ಅರಸೊತ್ತಿಗೆಯ ಬಗ್ಗೆ, ದಸ್ಯುಗಳನ್ನು ಕ್ರೂರವಾಗಿ ನಡೆಸಿಕೊಂಡ ಆರ್ಯಧರ್ಮದ ರೀತಿ ರಿವಾಜುಗಳ ಬಗ್ಗೆ ಕಟುವಾಗಿ ವಿಮರ್ಶಿಸುತ್ತಾರೆ.

ಹನುಮಂತನ ಹುಡುಗಾಟದ, ಲಂಕಾದಹನ ಪ್ರಕರಣದಲ್ಲಿ ಬಲಿಪಶುವಾದವರ ದೃಷ್ಟಿಯಿಂದ ನೋಡಿದಾಗ ಇಲ್ಲಿ ಹೊಸ ಬಣ್ಣ ಪಡೆಯುತ್ತದೆ. ತನ್ನ ಜಾತಿ ಬಾಂಧವರಿಗೆ ಬೆನ್ನು ತಿರುಗಿಸಿ ಸ್ವಯಿಚ್ಛೆ ಯಿಂದ ರಾಮಚಂದ್ರನಿಗೆ ಶರಣಾಗಿ ತನ್ನಲ್ಲಿ ಸ್ವಾಮಿ ಭಾವವನ್ನು ಮರೆಯುವ ರಾಮನ ದಾಸನಾದ ಹನುಮಂತ ಭಾರತದ ಕಪ್ಪು ಸಾಹೇಬರನ್ನು ನೆನಪಿಸುತ್ತಾನೆ.



ಹದಿನಾಲ್ಕು ವರ್ಷಗಳ ಕಾಲ ಸಂನ್ಯಾಸಿನಿಯ ಜೀವನವನ್ನು ಮುಗಿಸಿದ ನಂತರ ಅರಮನೆಯೊಳಗೆ ಊರ್ಮಿಳೆ ಪ್ರವೇಶಿಸುವ ದೃಶ್ಯದೊಂದಿಗೆ ನಾಟಕ ಆರಂಭವಾಗುತ್ತದೆ. ಗಂಡ ಲಕ್ಷ್ಮಣನ ಭೇಟಿಗಾಗಿ

ಉತ್ಸುಕತೆಯಿಂದ ಕಾಯುತ್ತಿರುವ ಊರ್ಮಿಳಾ ಮನದ ಪಟಲದ ಮೇಲೆ ಅಲ್ಲಿಯವರೆಗೂ ನಡೆದ ಘಟನೆಗಳನ್ನು ತಂದುಕೊಂಡು ಅನುಭವಿಸುತ್ತಾಳೆ :

ರಾಮನ ಪಟ್ಟಾಭಿಷೇಕಕ್ಕೆ ನಡೆದ ಸಿದ್ಧತೆಗಳು, ಕೈಕೇಯಿಯ ವಚನ ಪರಿಪಾಲನೆಗಾಗಿ ವನವಾಸ, ದಶರಥನ ಅಸಾಹಾಯಕತೆ, ಲಕ್ಷ್ಮಣನಲ್ಲಿನ ಆತ್ಮವಿಶ್ವಾಸದ ಕೊರತೆ - ಈ ಎಲ್ಲ ಘಟನೆಗಳು ಊರ್ಮಿಳೆಯ ಕಣ್ಣ ಮುಂದೆ ಬರುತ್ತವೆ. ಇದೆಲ್ಲದರ ನಂತರ ಊರ್ಮಿಳೆ ಅತ್ಯುತ್ಸಾಹದಿಂದ ಗಂಡನ ಮಿಲನಕ್ಕಾಗಿ ಕಾದಿರುವಾಗ ಲಕ್ಷ್ಮಣನ ಪ್ರತಿಕ್ರಿಯೆ ಅವಳಲ್ಲಿ ನಿರಾಸೆ ಹುಟ್ಟಿಸುತ್ತದೆ. ಸ್ವಕೇಂದ್ರಿತ ಲಕ್ಷ್ಮಣನ ತಣ್ಣನೆಯ ಪ್ರತಿಕ್ರಿಯೆಯಿಂದ ಅವಳ ಉತ್ಸಾಹಕ್ಕೆ ನೀರೆರಚಿದಂತಾಗುತ್ತದೆ. ಅವಳ ಪತಿನಿಷ್ಠೆ ಮತ್ತು ಪಾವಿತ್ರ್ಯದ ಬಗ್ಗೆ ಶಂಕೆಯೇ ಇಲ್ಲದ ಲಕ್ಷ್ಮಣನಿಗೆ ಅವಳು ತನ್ನ ಸಂತಾನದ ಬಗ್ಗೆ ಮಾತನಾಡಿದಾಗ ಆಘಾತವಾಗುತ್ತದೆ. ಆದರೆ ಅವಳು ತಾನು ಪ್ರೀತಿಯಿಂದ ನೆಟ್ಟು ಬೆಳಸಿದ ಮರಗಿಡಗಳನ್ನೇ ತನ್ನ ಮಕ್ಕಳೆಂದು ಹೇಳುತ್ತಿದ್ದಾಳೆಂಬ ವಿಷಯ ಅರಿವಾದೊಡನೆ ಅವನು ಅಹಂಕಾರ ಮೆರೆಯುತ್ತಾನೆ. ಮನುಷ್ಯರನ್ನೇ ಕಪಿಯೆಂದು ಭಾವಿಸುವ ಆರ್ಯರಿಗೆ ಮರಗಳು ಮಕ್ಕಳಾಗುವುದು ಹೇಗೆ ಸಾಧ್ಯ ಎಂದು ಊರ್ಮಿಳಾ ಟೀಕಿಸುತ್ತಾಳೆ. ಅವಳು ತಾನು ಬೆಳೆಸಿದ ಮರಗಳಲ್ಲೇ ತೃಪ್ತಿಯನ್ನು ಕಾಣುತ್ತಾಳೆ.

ಒಬ್ಬ ಪಕ್ವ ಪ್ರತಿಭಾವಂತ ಕಲಾವಿದೆಯಾಗಿ ಊರ್ಮಿಳೆಯ ಒಂಟಿತನ, ದುಃಖ, ಉದ್ವೇಗ, ಕೋಪ ಮತ್ತು ಸಿನಿಕತೆಯನ್ನು ಅಭಿವ್ಯಕ್ತಿಸುವಲ್ಲಿ ಮಂಗಳಾ ಮನಮುಟ್ಟುವಂತಹ ಅಭಿನಯ ನೀಡಿದ್ದಾರೆ. ಅವರ ಧ್ವನಿ, ಮುಖದ ಭಾವ, ದೇಹದ ಭಾಷೆ- ಎಲ್ಲಕ್ಕೂ ಒಂದು ಸ್ಪಷ್ಟತೆ, ವಿವಿಧ ಲಯಗಳಿಗೆ ಹಿಗ್ಗುವ ಬಾಗು, ಬಳಕುಗಳು, ಉದೇಶಿತ ಗುರಿಯನ್ನು ಮುಟ್ಟುವ ಸಾಮರ್ಥ್ಯ ಎಲ್ಲವೂ ವ್ಯಕ್ತವಾಗುತ್ತದೆ. ಅತ್ಯಂತ ಸರಳವಾದ ವಸ್ತ್ರವಿನ್ಯಾಸ ಇದಕ್ಕೆ ಮೆರಗು ಕೊಟ್ಟಿದೆ. ಜರಿ ಅಂಚಿನ ಬಿಳಿಯ ಸೀರೆ ಮತ್ತು ಜರಿಯ ದುಪ್ಪಟ- ಇವೆರಡೂ ಒಟ್ಟಾಗಿ ಸೇರಿ ವೈರಾಗಿಣಿಯ ಮತ್ತು ರಾಣಿಯ ಭಾವವನ್ನು ಉಂಟುಮಾಡುವಲ್ಲಿ ಸಫಲವಾಗಿದೆ. ಇಡೀ ನಾಟಕದಲ್ಲಿ ಮಂಗಳಾ ಒಂದು ಪಾತ್ರದಿಂದ ಮತ್ತೊಂದು ಪಾತ್ರಕ್ಕೆ ಬದಲಾಗುವಾಗ ತನ್ನ ಆಂಗಿಕ ಭಾಷೆಯನ್ನು ಬದಲಾಯಿಸುತ್ತಿದ್ದುದಲ್ಲದೆ, ಹೊದೆ ದುಪ್ಪಟ ಬದಲಾಯಿಸುವುದರ ಮೂಲಕ ಅಭಿನಯ ನೀಡಿದರು.

ಇಡೀ ನಾಟಕದಲ್ಲಿ ಕಂಡು ಬರುವ ಕರ್ಕಶ ಅನುಭವದ ಒಂದು ಎಳೆ ಕೈಕೇಯಿಯ ಪಾತ್ರ ಚಿತ್ರಣವು ಅತ್ಯಂತ ಒರಟಾಗಿರುವದಷ್ಟೇ ಅಲ್ಲದೆ ಆಡು ಮಾತು ಮತ್ತು ಗ್ರಾಂಥಿಕ ಸಂಭಾಷಣೆಗಳ ಮಿಶ್ರಣವೂ ಇದಕ್ಕೆ ಕಾರಣವಾಗಿದೆ. ವಾಲ್ಮೀಕಿ ಸೃಷ್ಟಿಸಿದ ಸಹಾನುಭೂತಿಯನ್ನು ಪಡೆಯದ ಕೈಕೇಯಿಯ ಪಾತ್ರವು ಇಡೀ ನಾಟಕದಲ್ಲಿ ಎಲ್ಲೂ ಸವಾಲಾಗದೆ, ಮರು ವಿಮರ್ಶೆಗೆ ಒಳಗಾಗದೆ ಅದೇ ರೀತಿ ಚಿತ್ರಿತವಾಗಿರುವುದು ಆಶ್ಚರ್ಯದ ಸಂಗತಿ. (ಇದೇ ನಾಟಕಕಾರರು ಮಂಥರೆಯ ಪಾತ್ರವನ್ನು ಕುರಿತು ಚಿತ್ರಿಸುವಾಗ ಭಿನ್ನ ನಿಲುವು ತಳೆದಿದ್ದಾರೆ.) ನಾಟಕದಲ್ಲಿ ಈ ದೃಶ್ಯದ ಅಭಿನಯ ಸಾಮರ್ಥ್ಯವನ್ನು ನಿರ್ವಹಿಸುವ ಸಂಭ್ರಮದಲ್ಲಿ ಮಂಗಳಾರ ಕೈ ಕೇಯಿಯ ಅಭಿನಯ ತುಸು ಅತಿಯಾಯಿತೆಂದೆನಿಸುತ್ತದೆ. ತಲೆಯನ್ನು ವಿಪರೀತ ತಿರುಗಿಸುತ್ತಾ, ಹೆಜ್ಜೆಯನ್ನು ಜೋರಾಗಿ ಶಬ್ದದೊಂದಿಗೆ ಕುಟ್ಟುವ ಅಭಿನಯ ಅಬ್ಬರ ಮತ್ತು ಏಕತಾನತೆಯನ್ನು ಉಂಟುಮಾಡಿತು.

ಮಾಲತೇಶ ಬಡಿಗೇರರ ರಂಗಸಜ್ಜಿಕೆ ತುಂಬ ಸರಳವಾಗಿ ಮತ್ತು ಸೂಕ್ತವಾಗಿತ್ತು. ರಂಗದ ಮಧ್ಯೆ ಇದ್ದ ಒಂದೇ ಒಂದು ಅಲಂಕೃತ ಕಂಭ ಅರಮನೆಯ ಭಾವವನ್ನು ಉಂಟುಮಾಡಿತಲ್ಲದೆ. ನಿರ್ದಿಷ್ಟ ಜಾಗದ ಅನುಭವವನ್ನೂ ಕೊಟ್ಟಿತು. ಅದನ್ನು ಬಿಟ್ಟರೆ ರಂಗದ ಮೇಲೆ ಇದ್ದದ್ದು ಒಂದು ಸ್ಟೂಲ್ ಮಾತ್ರ.

ಮಂಗಳಾ ರಂಗಸಲಕರಣೆಯಾಗಿ ಬಳಸಿದ್ದು ಒಂದು ಹೂವಿನ ಬುಟ್ಟಿ ಮತ್ತು ಕೆಲವು ಹೂಗಳು. ಗಜಾನನ ಅವರ ಸಂಗೀತ ಮತ್ತು ಧ್ವನಿ ನಾಟಕದ ಜೀವಂತಿಕೆಗೆ ಕಾರಣವಾಯಿತಾದರೂ, ಇನ್ನೂ ಸ್ವಲ್ಪ ಕಡಿಮೆಯಿದ್ದರೆ ಚೆನ್ನಾಗಿರುತ್ತಿತ್ತು.

ನಾಟಕದ ಕೊನೆಯ ದೃಶ್ಯವು ಜೀವದಾಯಿನಿಯಾದ ಸ್ತ್ರೀ ಸತ್ವವನ್ನು ನಿರೂಪಿಸುವ ಊರ್ಮಿಳೆಯ ಅನುಭವವನ್ನು ಕೊಡುವಲ್ಲಿ ಸಮರ್ಥವಾಯಿತು.

ಕೃಪೆ -ದಿ ಹಿಂದೂ

# ಸಮೃದ್ಧ ಕರ್ನಾಟಕ - ಸದೃಡ ಹೆಜ್ಜೆ

★ ಕೃಷಿ - ಕೃಷಿ ವಲಯಕ್ಕೆ ಉತ್ತೇಜನ ನೀಡಲು 412 ಕೋಟಿ ರೂ. ಗಳ ಯೋಜನಾ ಅನುದಾನ 840 ಕೋಟಿ ರೂ. ಗಳಿಗೆ ಹೆಚ್ಚಳ.

★ ಕೃಷಿ ಉತ್ಪನ್ನಗಳಿಗೆ ಮಾರುಕಟ್ಟೆ ಬೆಂಬಲಕ್ಕಾಗಿ 100 ಕೋಟಿ ರೂ. ಗಳ ಆವರ್ತನಿಧಿ.

ಗ್ರಾಮೀಣಾಭಿವೃದ್ಧಿ

★ ಗ್ರಾಮೀಣ ಜನತೆಯ ಬದುಕಿಗೆ ಹೊಸ ಚೇತನ ನೀಡಲು ರೂ. 690 ಕೋಟಿಗಳ ಜಲಾನಯನ ಯೋಜನೆ. ರೂ. 670 ಕೋಟಿ ವೆಚ್ಚದಲ್ಲಿ ಕೆರೆ ನಿರ್ವಹಣಾ ಯೋಜನೆ ಮತ್ತು ರೂ.1035 ಕೋಟಿ ವೆಚ್ಚದಲ್ಲಿ ಗ್ರಾಮೀಣ ನೀರು ಸರಬರಾಜು ಯೋಜನೆ ಅನುಷ್ಠಾನ.

★ ಹಿಂದುಳಿದ ವರ್ಗಗಳ ಸ್ವಯಂ ಉದ್ಯೋಗಕ್ಕಾಗಿ ರೂ. 20 ಕೋಟಿಯೊಂದಿಗೆ ಶ್ರಮ ಶಕ್ತಿ ಯೋಜನೆ.

ಪ್ರಾಥಮಿಕ ಶಿಕ್ಷಣ

★ ಅಕ್ಷರ ದಾಸೋಹ ಸರ್ಕಾರಿ ಮತ್ತು ಅನುದಾನಿತ ಶಾಲೆಗಳಲ್ಲಿರುವ 7 ನೇ ತರಗತಿವರೆಗಿನ ಎಲ್ಲಾ ಮಕ್ಕಳಿಗೂ ವಿಸ್ತರಣೆ. ಹೆಚ್ಚುವರಿಯಾಗಿ 25 ಲಕ್ಷ ಶಾಲಾ ಮಕ್ಕಳು ಫಲಾನುಭವಿಗಳು.

★ ಆರೋಗ್ಯ

ಮುಂದಿನ 5 ವರ್ಷಗಳಲ್ಲಿ ರೂ. 765 ಕೋಟಿ ವೆಚ್ಚದಲ್ಲಿ ಆರೋಗ್ಯ ಮತ್ತು ಪೌಷ್ಠಿಕಾಂಶ ಯೋಜನೆ ಯ ಅನುಷ್ಠಾನ. ಸಾರ್ವಜನಿಕ ಆರೋಗ್ಯ ರಕ್ಷಣೆಗೆ ಹೆಚ್ಚಿನ ಸೌಲಭ್ಯ.

★ ನೀರಾವರಿ

ಕೃಷ್ಣಾ ಮೇಲ್ದಂಡೆ ಯೋಜನೆಯಡಿ ವಿವಿಧ ಹಂತದಲ್ಲಿರುವ ಎಲ್ಲಾ ನೀರಾವರಿ ಕಾಮಗಾರಿಗಳು ಡಿಸೆಂಬರ್ 2005 ರೊಳಗೆ ಪೂರ್ಣ.

★ ಸಮಾಜ ಕಲ್ಯಾಣ

ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಸಣ್ಣ ರೈತರಿಗೆ ಮತ್ತಷ್ಟು ಪ್ರೋತ್ಸಾಹ ನೀಡಲು ಗಂಗಾ ಕಲ್ಯಾಣ ಕಾರ್ಯಕ್ರಮದಡಿ ರೂ. 13 ಕೋಟಿಗಳ ಹೆಚ್ಚುವರಿ ಅನುದಾನ. ಸಮಾಜ ಕಲ್ಯಾಣ ಕಾರ್ಯಕ್ರಮಗಳಿಗೆ ಯೋಜನಾ ಅನುದಾನ ರೂ. 435 ಕೋಟಿ ಏರಿಕೆ.

ಪ್ರಾದೇಶಿಕ ಅಸಮಾನತೆ ನಿವಾರಣೆಯತ್ತ ದಿಟ್ಟ ಹೆಜ್ಜೆ.

★ ಪ್ರಾದೇಶಿಕ ಅಸಮಾನತೆಯ ನಿವಾರಣೆಗಾಗಿ ಶ್ರೀ ನಂಜುಂಡಪ್ಪ ಸಮಿತಿ ಮಾಡಿರುವ ಶಿಫಾರಸ್ಸುಗಳು ಹಂತಹಂತವಾಗಿ ಜಾರಿ.

★ ಉತ್ತರ ಕರ್ನಾಟಕದ ಅಭಿವೃದ್ಧಿ ರೂ. 7,170 ಕೋಟಿಗಳ ಬೃಹತ್ ಯೋಜನಾ ಅನುದಾನ. ಇದು ರಾಜ್ಯದ ಒಟ್ಟಾರೆ ಯೋಜನಾ ಗಾತ್ರದ ಶೇ. 54 ರಷ್ಟು

★ ಉತ್ತರ ಕರ್ನಾಟಕದ ತೀರ ಹಿಂದುಳಿದ 37 ತಾಲ್ಲೂಕುಗಳ ಸಮಗ್ರ ಅಭಿವೃದ್ಧಿಗೆ ಆದ್ಯತೆ.

★ ಉತ್ತರ ಕರ್ನಾಟಕವೂ ಸೇರಿದಂತೆ ರಾಜ್ಯದ ಹಿಂದುಳಿದ ಪ್ರದೇಶಗಳ ಅಭಿವೃದ್ದಿಗಾಗಿ ಅವುಗಳಿಗೆ ವಿಶೇಷ ಸ್ಥಾನಮಾನ ನೀಡಲು ಸಂವಿಧಾನದ 371 ನೇ ವಿಧಿಗೆ ತಿದ್ದುಪಡಿ ತರಲು ಕೇಂದ್ರಕ್ಕೆ ಒತ್ತಾಯ.

ರಾಷ್ಟ್ರದ ಸಂಪದಭಿವೃದ್ಧಿಯಲ್ಲಿ ನಾವೆಲ್ಲರೂ ಭಾಗಿಗಳು

ಕರ್ನಾಟಕ ವಾರ್ತೆ

## ಕುವೆಂಪು ಕಾವ್ಯ

# ಒಂದು ಮಹಿಳಾ ಓದು

- ಡಾ. ವಿನಯಾ

ಕುವೆಂಪು ಕನ್ನಡದ ಹೆಮ್ಮೆ, ವಸಾಹತುಶಾಹಿ ಕನ್ನಡ ಸಾಹಿತ್ಯಕ್ಕೆ ಆತ್ಮ ಗೌರವದ ದೀಕ್ಷೆ ಕೊಟ್ಟವರು. ವೈಚಾರಿಕ ಪ್ರಜ್ಞೆ ಹಾಗೂ ಮಾನವೀಯ ಚಿಂತನೆಯನ್ನು ಅಭಿವ್ಯಕ್ತಿ ಧರ್ಮವಾಗಿಸಿಕೊಂಡವರು. ದೇಶ,ಭಾಷೆ,ಮತ, ಧರ್ಮ, ಸ್ವಾಭಿಮಾನ, ಮೌಢ್ಯ ಎಲ್ಲದರ ಕುರಿತು ಅರ್ಥಪೂರ್ಣ ಚಿಂತನೆಯನ್ನು ಬಿತ್ತಿದವರು 'ನಿನ್ನೆದೆಯ ದನಿಯೆ ಋಷಿ, ಮನು ನಿನಗೆ ನೀನು' ಎಂದು ಅರಿವಿನ ಪರಧಿಯನ್ನು ವಿಸ್ತರಿಸಿದವರು. ಕನ್ನಡದ ಸಾಂಸ್ಕೃತಿಕ ಅಂತಃಸತ್ವವಾಗಿ ನಿಂತವರು. ಬಹಳಷ್ಟು ಆಲೋಚನೆಗಳಲ್ಲಿ ತಮ್ಮ ಕಾಲಕ್ಕಿಂತ ಮುಂದಿದ್ದವರು. ಇಂತಹ ಕುವೆಂಪು ಕಾವ್ಯಗಳನ್ನು ಮಹಿಳಾ ಓದಿಗೆ ಅನ್ವಯಿಸಿದಾಗ ಕಂಡ ಅಂಶಗಳು ಇಲ್ಲಿವೆ.



ಕುವೆಂಪು ಕಾವ್ಯಗಳಲ್ಲಿ ಹೆಣ್ಣು ವ್ಯಕ್ತಗೊಳ್ಳುವುದು ಹೆಂಡತಿಯಾಗಿ, ದಾಂಪತ್ಯವನ್ನು ಯೋಗ ಎಂದ ಕವಿ ಅನುದಿನದ ಬದುಕನ್ನು ಕಾವ್ಯದ ಕನ್ನಡಿಯಲ್ಲಿಟ್ಟು ನೋಡಲೆತ್ನಿಸಿದವರು. ಸಂಖ್ಯಾದೃಷ್ಟಿಯಿಂದಲೂ ಹೆಚ್ಚು ದಾಂಪತ್ಯ ಗೀತಗಳನ್ನು ಬರೆದವರು. ದಾಂಪತ್ಯದ ಕೇಂದ್ರ ಬಿಂದುವಾದ ಹೆಂಡತಿಯನ್ನು ಕುರಿತು ನಿಲುವು ಮತ್ತು ಪ್ರಾಸಂಗಿಕವಾಗಿ ಬೇರೆ ಬೇರೆ ಉಪಮೆ ಗೃಹೀತಗಳಲ್ಲಿ ವ್ಯಕ್ತವಾಗುವ ಅಂಶಗೆಳನ್ನು ಆಧರಿಸಿ ಕುವೆಂಪು ಕಾವ್ಯದಲ್ಲಿ ರೂಪುಗೊಂಡ ಹೆಣ್ಣಿನ ಚಿತ್ರಣವನ್ನು ನೋಡಬಹುದು.

ಎರಡು ಎಲುಬಿನ ಗೂಡು
ಒಂದಾದೊಡನೆ ನೋಡು
ಹಿಂದನಾ ಸುಡುಗಾಡು
ಆಯ್ತು ಬೃಂದೆ

ಎಂದು ನಂಬಿ ಪ್ರೇಮವನ್ನು ಧ್ಯಾನದಂತೆ ನಿರ್ವಹಿಸಿದವರು ಭೋಗ-ಯೋಗದ ಸಮನ್ವಯದ ಸಾಕ್ಷಾತ್ಕಾರವನ್ನು ಅನುರಣಿಸಿದವರು.

ನಿನ್ನಪ್ಪುಗೆ ನನಗೆ ಸತ್ಯಸ್ಯ ಸತ್ಯಮಂ
ತೋರ್ಪುದಾನಂದಮಂ ಮಿಕ್ಕೆಲ್ಲ ಮಿಥ್ಯಮಂ

ಎಂದು ವೈಯಕ್ತಿಕ ನಿವೇದನೆಯಲ್ಲೂ ಪ್ರೇಮದ ವಾಸ್ತವಿಕತೆಯನ್ನು ವಿಷದೀಕರಿಸುತ್ತಾರೆ. ಗಂಡ-ಹೆಂಡತಿ ಎಂಬುದು ಭಾಷಿಕವಾಗಿಯೂ ಆಳು- ಒಡೆಯ ಎಂದು ಅರ್ಥವಾಗುವ ವ್ಯವಸ್ಥೆಯಲ್ಲಿ, ಅದನ್ನೊಂದು ಸಮಾನ ಪರಿಶುದ್ಧ ಸಂಬಂಧವಾಗಿರುವಂತೆ ರೂಪಿಸುವಲ್ಲಿ ಕವಿ ಯತ್ನಿಸುತ್ತಾರೆ.

ಸಂಸಾರ ಸಾಗರದಿ
ಹೆಣ್ಣು ಗಂಡು
ಕುತ್ತಿಗೆಗೆ ಗುಂಡಲ್ಲ
ಬೆಣ್ಣೆ ಬೆಂಡು

ಹೆಣ್ಣನ್ನು ಭಾರ ಎಂದು ತಿಳಿದ ವ್ಯವಸ್ಥೆಯಲ್ಲಿ ಅವಳು ಆಧಾರ ಎಂದು ರೂಪಿಸುತ್ತಾರೆ. ತನ್ನ ಸರ್ವಸಕ್ಕೂ ಅವಳೇ ಪ್ರೇರಕ. ಪರಮ ಗತಿಯೂ ಅವಳೇ. ಮತಿಯೂ ಅವಳೇ. ಪ್ರೇಮದವತಾರಿಣಿಯೇ, ಓ ನನ್ನ ಹೇಮಾಕ್ಷಿ ಎಂದು ಉದಾತ್ತೀಕರಿಸುತ್ತಾರೆ. ಹೆಣ್ಣು ಪುರುಷನ ಸಾಧನೆಗೆ ಅಡ್ಡಿ ಎಂದು ನಂಬಿದ ಸಂಸ್ಕೃತಿಯಲ್ಲಿ ಅವಳೇ ತನ್ನ ಸಾಧನೆಯ ನೆಲೆ ಎನ್ನುತ್ತಾರೆ.

ದೇವಿ, ಪ್ರತಿಭೆಗೆ ನೀನೆ ಭಾವ ವಿದ್ಯುಶಕ್ತಿ
ಕಲೆಗೆ ವಿದ್ಯಾಶಕ್ತಿ ಪ್ರಾಣಕ್ಕೆ ಪ್ರೇಮಶಕ್ತಿ

ಇವು ಪ್ರೇಮ ನಿವೇದನೆಯ ಪ್ರಾಸಂಗಿಕ ಭಾವಗಳಾಗಷ್ಟೇ ಉಳಿಯದೆ ಸತಿ-ಪತಿ ಭಾವದ ಜಿಜ್ಞಾಸೆಯಾಗಿಯೂ ಮಹತ್ವದ್ದಾಗುತ್ತದೆ. ಗಂಡು-ಹೆಣ್ಣಿನ ಸಂಬಂಧದ ಅಸಹಜ ಸ್ಥಿತಿಯನ್ನು ಸಹಜತೆಯೆಡೆಗೆ ಹೊರಳಿಸಲು ಕುವೆಂಪು ಕೈಕೊಂಡ ಮಾರ್ಗವಾಗಿಯೂ ಗಮನಾರ್ಹವಾಗುತ್ತದೆ. ಸ್ವರ್ಗದ್ವಾರದಿ ಯಕ್ಷ ಪ್ರಶ್ನೆ ಎಂಬ ಕವಿತೆ ಈ ಹಿನ್ನಲೆಯಿಂದ ತುಂಬ ಮಹತ್ವದ್ದಾಗಿದೆ. ಒಂದು ರಾತ್ರಿ ಕವಿ ಕನಸು ಕಾಣುತ್ತಾರೆ. ಆ ಕನಸಿನಲ್ಲಿ ಕವಿ ಸ್ವರ್ಗದ ಬಾಗಿಲಿನಲ್ಲಿ ನಿಂತಿದ್ದಾರೆ. ದ್ವಾರಪಾಲಕ ಯಕ್ಷ ಬಾಗಿಲು ತೆರೆಯಲು ನಿನ್ಯಾರು ? ಎಂದು ಕೇಳುತ್ತಾನೆ. ಕವಿ ತನ್ನ ಪರಿಚಯ ಹೇಳಿಕೊಳ್ಳುತ್ತಾರೆ. ತಾನು ರಾಷ್ಟ್ರಕವಿ ದೊಡ್ಡಕವಿ ಪದ್ಮಭೂಷಣ ಏನು ಹೇಳಿದರೂ ಬಾಗಿಲು ತೆರೆಯುವುದಿಲ್ಲ. ಕೊನೆಗೆ ನಾನು ಹೇಮಿಯ ಗಂಡ ಎಂದಾಗ ಬಾಗಿಲು ತೆರೆಯುತ್ತದೆ. ಗಂಡನ ಹೆಸರಿದ್ದರೆ ಮಾತ್ರ ಹೆಣ್ಣಿಗೆ ಮಾನ ಸಮ್ಮಾನ ಎಂಬ ವ್ಯವಸ್ಥೆಯ ಆಲೋಚನೆಯನ್ನು ಕವಿ ಪ್ರಾಯೋಗಿಕವಾಗಿ ತಿರುವು ಮುರುವುಗೊಳಿಸುತ್ತಾರೆ.

ಹೆಂಡತಿಯನ್ನು ಸಂಯಮ, ರೂಪ, ಗುಣ, ತ್ಯಾಗ-ಭೋಗಗಳ ಆದರ್ಶವಾಗಿ ಕಾಣುವ ಕವಿ ಅವಳನ್ನು ಗುರುಕೃಪೆ ಎನ್ನುತ್ತಾರೆ.

ಗುರುವು ಕೊಟ್ಟ ಪರಮ ಭಿಕ್ಷೆ

ನೀನೆ ನನಗೆ ಧರ್ಮ ರಕ್ಷೆ

ಹೆಂಡತಿ ದೈವ ಕೃಪೆಯ ರೂಪ ಎಂದು ಪರಿಗಣಿಸಿದವರು ಕುವೆಂಪು. ಈ ದೈವೀಕರಣದ ಕಾರಣದಿಂದಾಗಿಯೇ ಬೇಂದ್ರೆಯವರ 'ವಿಧಿತಂದ ವಧು'ವಿನ ಸಹಜತೆ ಇಲ್ಲಿಲ್ಲ. ಕುವೆಂಪು ಕಾವ್ಯ ಅನಗತ್ಯ ಆದರ್ಶದ ನಿಲುವೇರುವ ಮೂಲಕ ವೈಯಕ್ತಿಕವೂ ಪರಿಮಿತವೂ ಆಗಿ ವಿಸ್ಮಯಕ್ಕೆ ಪಾತ್ರವಾಗುತ್ತದೆ ಎಂಬ ಡಾ. ಜಿ. ಎಸ್. ಶಿವರುದ್ರಪ್ಪನವರ ಅಭಿಪ್ರಾಯವನ್ನು ಒಪ್ಪ ಬೇಕಾಗುತ್ತದೆ. ದಾಂಪತ್ಯವನ್ನು ಜನ್ಮಾಂತರದ ಮೈತ್ರಿ ಎಂದು ಒಪ್ಪಿದ ಕುವೆಂಪು ಆ ಜನ್ಮಾಂತರದ ಭಾವವನ್ನು ಪೂರ್ಣ ಗಾಢತೆಯೊಂದಿಗೆ ಸ್ವೀಕರಿಸಿದರು. ಎಲ್ಲೂ ಅದೊಂದು ಅನಿವಾರ್ಯತೆ, ಹೊಂದಾಣಿಕೆ ಎಂಬ ಅಭಿಪ್ರಾಯ ಕಂಡು ಬರುವದಿಲ್ಲ. ಸತಿ ಸಂಸಾರಿಕ ಅಗತ್ಯಕ್ಕೆ ಜೊತೆಯಾದವಳು ಎಂದಷ್ಟೇ ಒಪ್ಪಲು ಕವಿ ಸಿದ್ದರಿಲ್ಲ.

ಲೋಕರಂಗದಲ್ಲಿ ಸತಿ

ನಿತ್ಯದಲ್ಲಿ ಭಗವತಿ

ಎನ್ನುತ್ತಾರೆ. ಅವಳ ಇಡೀ ವ್ಯಕ್ತಿತ್ವ ಕಾಯುವ ಕಣ್ಣಿನಂತೆ ಬದುಕನ್ನು ಸಂಬಾಳಿಸುತ್ತದೆ ಎಂದು ಕವಿ ಬಲ್ಲರು. ಅದರ ಕಾರಣವನ್ನು ಶೋಧಿಸುವದಕ್ಕಿಂತ ಪರಿಣಾಮದಲ್ಲಿ ವಿರಮಿಸಲು ಕವಿ ಬಯಸುತ್ತಾನೆ. ಇದಕ್ಕೆ ರಾಮಕೃಷ್ಣ ಪರಮಹಂಸರು ಹಾಗೂ ಶಾರದಾಮಾತೆಯರ ಬದುಕಿನಿಂದ ಪ್ರಾಭಾವಿತರಾಗಿದ್ದು ಕಾರಣವಾಗಿರಬಹುದು. ಹಾಗಾಗಿಯೇ ಕುವೆಂಪು ಅವರ ದಾಂಪತ್ಯದ ಪರಿಕಲ್ಪನೆಯಲ್ಲಿ ಅಧ್ಯಾತ್ಮಕ ಸ್ಪರ್ಶವಿದೆ. ಪಾವಿತ್ರದ ನಿಲುವಿದೆ. ಆಧುನಿಕ ಕನ್ನಡ ಕಾವ್ಯ ಪರಂಪರೆಗೆ ಕುವೆಂಪು ಅವರ ದಾಂಪತ್ಯ ಗೀತೆಗಳು ಮುಡಿಯುಟ್ಟು ಬಂದವು. ಸಜೀವ ಸ್ಪರ್ಶದಿಂದ ದೂರಾದವು. ಈ ಮಡಿವಂತಿಕೆ ಅಭಿವೃದ್ಧಿ ವಿಧಾನವನ್ನು ಆಕ್ರಮಿಸಿದೆ. ತನ್ನನ್ನು ಕವಿ ಮಂಚಯೋಗಿ ಎಂದು ಕರೆದುಕೊಳ್ಳುತ್ತಾರಾದರೂ ಪ್ರಣಯ ಕಾವ್ಯಗಳಲ್ಲಿ ಸ ವ್ಯಾಮೋಹಕ್ಕಿಂತ ಗೌರವ ಪ್ರಧಾನವಾಗುತ್ತದೆ.

ನಿನ್ನ ಮೈ ದೇಗುಲದಿ

ನಾನು ಪೂಜಾರಿ

ನೀನೆ ದೇವತೆ ಅಲ್ಲಿ

ನನ್ನೆದೆಯ ನಾರಿ

ಸತಿ-ಪತಿ ಸಮ್ಮಿಲನ ಕುವೆಂಪು ಅವರಿಗೆ ಆತ್ಮ ಸಾಕ್ಷಾತ್ಕಾರದ ಒಂದು ಪ್ರಯೋಗ. ಎಂತಹ ತೀವ್ರತೆಯಲ್ಲೂ ಅದು ಬರಿಯ ಭೋಗವಲ್ಲ. ನಿನ್ನ ವಕ್ಷ ಶೃಂಗಾಕ್ರಮದಿ ನಾ ತಪಂಗೈವ ವಟು ದೇವನಿತ್ತ ಧಾರಾಸ್ವರ್ಗ ನನಗೆ ನಿನ್ನ ಮೆಯ್ ಎನ್ನುತ್ತಾರೆ. ಮಿಲನ ಅಂತಿಮವಲ್ಲದೆ ಅದೊಂದು ಸಾಧ್ಯತೆಯಾಗಿ ತೋರುತ್ತದೆ. ಸಾಂಪ್ರದಾಯಿಕ ಕುಟುಂಬ ವ್ಯವಸ್ಥೆ.

ಗಂಡ ಹೆಂಡತಿ ಸಂಬಂಧವನ್ನು ಒಂದು ಕಡ್ಡಾಯ ಜೀವನ ವಿಧಾನ ಎಂಬ ರೀತಿಯಲ್ಲಿ ಕಾಣುತ್ತ ಬಂದಿತ್ತು. ಪ್ರಣಯ ಕುಟುಂಬದ ಹೊರಗಿನ ಸಾಧ್ಯತೆಯಾಗಿ ಅರ್ಥೈಸಲಾಗಿತ್ತು. ಜಡಗಟ್ಟಿದ ಕೌಟುಂಬಿಕ ರಚನೆಗೆ ಹೊಸ ಕಸುವನ್ನು ನೀಡುತ್ತಾರೆ. ಆದರೆ ಅತಿ ಗೌರವ ಮತ್ತೊಂದು ಅಸ್ಪಷ್ಯತೆಯ ಅಪಾಯವನ್ನು ತಂದೊಡ್ಡಿತು.

ಸತಿ-ಪತಿ ಸಂಬಂಧ ಅಂತಿಮವಾಗಿ ಎಲ್ಲವೂ ಆಗಿ ಕರಗಿ ಹೋಗುವ ಜೀವದ್ರವ್ಯವನ್ನು ಕವಿ ಗುರ್ತಿಸುತ್ತಾರೆ.

ಪ್ರೆಯಿಸಿ? ಸಹಧರ್ಮಿಣಿ ? ಹೆಂಡತಿ ? ತಾಯಿ ?

ಲೌಕಿಕ ಸಂಬಂಧಕೆ ತೊದಲಿತು ಬಾಯಿ.

ಇಂಥಲ್ಲಿ ಲೌಕಿಕತೆಯ ನಿರಾಕರಣ ದಾಂಪತ್ಯಕ್ಕೆ ಅನವಶ್ಯಕ ದೈವೀಕರಣವನ್ನು ನೀಡುತ್ತದೆ.

ಯಾರು ಕೈ ಬಿಟ್ಟರೂ ನೀ ಬಿಡದಿರು

ನೀನೆನ್ನ ತಾಯ್ ತಂದೆ ಗುರು ದೇವರು

ಜಗದ ಜನಗಣತಿಯಲ್ಲಿ ಇಂಥವನ ಹೆಂಡತಿ, ಇಂಥವನ ಮಗಳು ಎಂದು ಮಾತ್ರ ಕರೆಸಿಕೊಂಡ ಅವಳು ತನ್ನ ಬದುಕಿನ ಸರ್ವಸ್ವ ಎಂದು ಕವಿ ಜೀವ ತುಂಬುತ್ತಾರೆ. ಇಲ್ಲೆಲ್ಲ ಪ್ರೇಮದ ಆಹ್ಲಾದವಿದೆ. ಆದರೆ ಇದೊಂದು ಅತಾರ್ಕಿಕ -ಲಕ್ಷಣವಾಗಿ ಉಳಿದುಬಿಡುತ್ತದೆ. ರತಿಯೆಂಬುದು ಇಹಲೋಕದಾಟವಾಗದೆ ಅದೊಂದು ಯೋಗವಾಗುವುದು ಕೇವಲ ಅಚ್ಚರಿಯನ್ನಷ್ಟೇ ಉಳಿಸುವಂತಾಯ್ತು. ಹೊಸ ಚಿಂತನೆಯ ಚೆಲುವು ಸಿಗದಂತಾಯ್ತು.

ಕುವೆಂಪು ಕಾವ್ಯಗಳಲ್ಲಿ ಹೆಣ್ಣು ವ್ಯಕ್ತಗೊಳ್ಳುವುದು ಹೆಂಡತಿಯ ರೂಪದಲ್ಲಿ. ವೈಯಕ್ತಿಕತೆಯ ದಟ್ಟ ಛಾಯೆ ಇರುವುದರಿಂದ ಹೆಣ್ಣಿನ ಬಗೆಗಿನ ಒಟ್ಟೂ ಅಭಿಪ್ರಾಯವಾಗಿ ನೋಡುವುದು ಕಠಿಣವೇ. ಆದರೆ ಕುವೆಂಪು ಕಾವ್ಯಗಳಲ್ಲಿ ಹೆಂಡತಿ ವ್ಯಕ್ತಗೊಳ್ಳುವ ಬಗೆಯ ವಿಶ್ಲೇಷಣೆ ಬಹುತೇಕ ಪ್ರಶ್ನೆಗಳಿಗೆ ಉತ್ತರವಾಗಬಲ್ಲದು. ಹೆಂಡತಿಯನ್ನು ದೈವತ್ವಕ್ಕೇರಿಸುವ ಕವಿ ಅವಳಲ್ಲಿ ಸೌಂದರ್ಯಾರಾಧನೆಯ ಆನಂದ ಮತ್ತು ತಾಯ್ತನದ ಪಾಲನಾ ಶಕ್ತಿಯನ್ನು ಕಾಣುತ್ತಾರೆ. ಕವಿ ಪತ್ನಿ ಹೇಮಾ ಹೆಸರನ್ನು 'ಹೇಮಾ! ಸತಿಯೇ' ಎಂದು ಬಿಡಿಸಿಡುತ್ತಾರೆ. ಅವಳು ಸತಿಯಷ್ಟೇ ಅಲ್ಲ ಮಾತೆಯೂ ಹೌದು ಎಂದು ಸೂಚಿಸುತ್ತಾರೆ.

ತಾಯ ಚರಣ ಕಿರಣವೊಂದು

ಕೃಪೆಯೊಳೆನ್ನ ಪೊರೆಯಲೆಂದು

ನಿನ್ನ ರೂಪದಿಂದ ಬಂದು

ಸಲಹುತಿರುವುದೆನ್ನ ನಿಂದು.

ಎನ್ನುತ್ತಾರೆ. ಹೆಣ್ಣಿನ ಮೌಲ್ಯವಿರುವುದೇ ಅವಳ ಪಾಲನಾ ಗುಣದಲ್ಲಿ. ಅವಳ ಎಲ್ಲ ಪಾತ್ರಗಳೂ ಆ ಪಾಲನಾಶಕ್ತಿಯ ವಿವಿಧ ರೂಪಗಳು ಎಂಬ ಸಾಂಪ್ರದಾಯಿಕ ತಿಳುವಳಿಕೆ ಕುವೆಂಪು ಅವರಲ್ಲೂ ಇದೆ. ಹೆಣ್ಣಿಗೆ ಮಾತೃತ್ವವನ್ನು ದೈವತ್ವವನ್ನು ಆರೋಪಿಸಿ ಧಾರಕ ಶಕ್ತಿಯ ಪ್ರತಿರೂಪವಾಗಿ ಕಾಣುವುದು ಸನಾತನ ಕಲ್ಪನೆಯೇ ಆಗಿದೆ. ಈ ಕಲ್ಪನೆಗೆ ಕುವೆಂಪು ಕಾವ್ಯಗಳೂ ಹೊರತಲ್ಲ ಎಂಬುದೇ ವಿಷಾದ. ಹೆಣ್ಣಿನ ವ್ಯಕ್ತಿತ್ವವನ್ನು ಪುರುಷ ಗೃಹಿತಗಳಿಂದ ಕಂಡ ಸಿದ್ದ ಮಾದರಿಗಳು ಇಲ್ಲೂ ಇವೆ. ತಾಯಿ - ದಾಸಿ, ಸತಿ-ಸೂಳೆ, ದೇವಿ - ರಕ್ಕಸಿ ಎಂಬ ವಿಭಜನೆಯಲ್ಲಿ ತಾಯ್ತನ, ಸತೀತ್ವ, ದೈವತ್ವಗಳನ್ನು ಆಯ್ದುಕೊಳ್ಳುವ ಕುವೆಂಪು, ನಿರ್ದಿಷ್ಟ ಚೌಕಟ್ಟಿನೊಳಗೇ ವರ್ತಿಸುವದರಿಂದ ಕೊಡುವ ಪರ್ಯಾಯಗಳು ಜಡವಾಗುತ್ತವೆ. ಹೆಂಡತಿಯ ಬೇಕು-ಬೇಡ, ಒಲವು-ನಿಲುವು, ಆಯ್ಕೆ-ಅನಿಸಿಕೆಗಳು ಅಗೋಚರವಾಗಿಯೇ ಉಳಿದುಬಿಡುತ್ತವೆ. ಇದರಿಂದ ಕಾವ್ಯ ಒಮ್ಮುಖ ಚಲನೆಯಂತೆ

ಕಾಣುತ್ತದೆ. ಮನದನ್ನೆ ಸ್ತಬ್ಧಚಿತ್ರದಂತೆ ಸರಿದುಹೋಗುತ್ತಾಳೆ. ಅಪರೂಪಕ್ಕೆ ಮೌನ ಮುರಿದಾಗಲೂ ರಸಿಕತೆಯನ್ನು ಮೆರೆವ ರಸರ್ಷಿಯ ಒಡನಾಟಕ್ಕೆ ಧನ್ಯತೆಯ ಪ್ರಣಾಮ ಸಲ್ಲಿಸುವದಷ್ಟೇ ಆಗಿ ಬಿಡುತ್ತದೆ. ಆದ್ದರಿಂದ ಕುವೆಂಪು ಅವರ ದಾಂಪತ್ಯ ಪ್ರೇಮದ ಕವಿತೆಗಳಿಗೆ ಪುರುಷ ಪ್ರಧಾನ ಧೋರಣೆ ಪ್ರಾಪ್ತವಾಗಿದೆ. ಚಿತ್ರಾಂಗದಾ ಕಾವ್ಯದಲ್ಲಿ ಚಿತ್ರಾಂಗದೆ ಅರ್ಜುನನಿಗೆ - ತನಿವಣ್ಣನುಂಡು ಸವಿ ಯಾರಾದರೇನಂತೆ ನಾಂ? ಹೆಸರಿನಲ್ಲಿ ರಸವೇ ? ಎಂದು ವ್ಯಕ್ತಿತ್ವ ನಿರಸನವನ್ನು ತೋರುತ್ತಾಳೆ. ನಾ ನಿನ್ನ ಕ್ರೀಡಾವಸ್ತು ಎಂಬ ಭೋಗ -ಭೋಗ್ಯ ಸಂಬಂಧವನ್ನು ಸ್ವೀಕರಿಸುತ್ತಾಳೆ. ಅರ್ಜುನ ಯಾವ ರೂಪದಲ್ಲಿದ್ದರೂ ಚಿತ್ರಾಂಗದೆ ಅವನನ್ನು ವ್ಯಕ್ತಿತ್ವಕ್ಕಾಗಿ ಪ್ರೀತಿಸುತ್ತಾಳೆ. ಆದರೆ ಅರ್ಜುನನ ಪ್ರೀತಿ ಪಡೆಯಲು ಅವಳು ಅತ್ಯಾಕರ್ಷಕ ಬೆಡಗಿನ ನಯ-ನಾಜೂಕಿನ ಹೆಣ್ಣಾಗಿಯೇ ಬರಬೇಕು ! ಗಾಂಢೀವಿಗೆ ಚಿತ್ರಾಂಗದೆಯ ಶೌರ್ಯ ಪರಾಕ್ರಮಗಳು ಆಕರ್ಷಣೆಯ ವಿಷಯಗಳಾಗುವದೇ ಇಲ್ಲ. ಬಿಲ್ಲಾಳ್ತನ ಕಲಿತ ಚಿತ್ರಾಂಗದೆ ಪಾರ್ಥನಿಗಾಗಿ ಹೆಣ್ಣಾಗುವ, ಸರ್ವವನ್ನೂ ಸಮರ್ಪಿಸಿಕೊಳ್ಳುವ, ಅರ್ಜುನ ದೂರಾದ ಮೇಲೂ ಅವನನ್ನೇ ಸ್ಮರಿಸುವ ಕೊನೆಗೆ ತಂದೆ-ಮಗನ ಯುದ್ಧದಲ್ಲಿ -

ಕೊಳ್ಳೆನ್ನ ಕೊಳ್ಳೆನ್ನ ಕಾಪಾಡು ಕಾಪಾಡು
ಸಲೆ ಸುತರನೋ ಮೃತ್ಯು

ಎಂದು ಆಕ್ರಂದಿಸಿ ಪ್ರಾಣಾರ್ಪಣೆಗೈದ ಚಿತ್ರಾಂಗದೆ ಕವಿಯನ್ನು ಕಲಕಿದ ಪಾತ್ರ ! ಚಿತ್ರಾಂಗದೆ, ರಕಾಕ್ಷಿ, ಸಾವಿತ್ರಿಯಂತಹ ಪಾತ್ರಗಳು ಕವಿಯನ್ನು ಸೆಳೆದದ್ದರ ಔಚಿತ್ಯವೇ ವಿಶಿಷ್ಟವಾದದ್ದು!

ಕುವೆಂಪು ತಮ್ಮ ಕಾವ್ಯದಲ್ಲಿ ಗೃಹಿಣಿ ಧರ್ಮ ಸಂಹಿತೆಯನ್ನೂ ರೂಪಿಸುತ್ತಾರೆ. !

ಗೃಹಿಣಿ ನೀನೆ ಗೃಹದ ದೇವಿ
ನೀನು ದೂರ ಹೊದರೆ
ಮಸಣ ಒಂದು ಹಾಳುಬಾವಿ
ಗೃಹವಿದು ! ಮನೆ ಎಂಬರೆ ?

ಎಂದು ಗೃಹಿಣಿಯನ್ನು ಗೃಹದೇವಿಯಾಗಿ ಗೃಹಿಣೀ ಗೃಹ ಮುಚ್ಯತೇ ಎಂಬ ಸನಾತನತೆಯನ್ನು ಮೆರೆಯುತ್ತಾರೆ. ಮದುವೆಯಾದ ನಂತರ ಮೊದಲನೆಯ ಬಾರಿಗೆ ತವರಿಗೆ ಹೋಗುತ್ತಿರುವ ಹೆಂಡತಿಗೆ -

ಗುಣ್ಪೆರಲಿ ನಡೆಯಲ್ಲಿ
ನುಣ್ಪೆರಲಿ ನುಡಿಯಲ್ಲಿ
ಸೊಂಪಿರಲಿ ಶೀಲದಲಿ
ಚೆಲ್ವಿನ ಕಣಿ

ಎಂದು ಉಪದೇಶಿಸುತ್ತಾರೆ. ನಿನ್ನ ನಡೆ-ನುಡಿಗಳ ಮೂಲಕ ಜನ ನನ್ನನ್ನು ಅಳೆಯುತ್ತಾರೆ ಎಂದು ಪ್ರೀತಿಯಿಂದ ಎಚ್ಚರಿಸುತ್ತಾರೆ. ವಿರಹದಲ್ಲಿ ಆತಂಕದ ಛಾಯೆಯೊಂದು ಸುಳಿದು ಹೋಗುತ್ತದೆ. ಕವಿ ಹೃದಯ ಮಂದಿರದ ದೇವಿಯೆ ಮಂದಿ ಮಣಿಯುವ ತೆರದಿ ಬಾಳು ಎನ್ನುವುದು ಅತ್ತೆ ಮಾವರಿಗಂಜಿ ಸುತ್ತೇಳು ನೆರೆಗಂಜಿ ಬದುಕು ಎಂಬ ತವರಿನ ಹಾರೈಕೆಯಂತೆಯೇ ಇದೆ. ಉಪದೇಶ, ರಕ್ಷಣೆ ಇಲ್ಲದ ಅವಳು ಇರಲಾರಳು ಎಂಬಲ್ಲಿ ಮತ್ತೇನು ಹೊಸದನ್ನು ಕಾಣಬಹುದು.

'ಮನೆ ಮನೆಯ ತಪಸ್ವಿನಿಗೆ' ಎಂಬ ಕವಿತೆಯಲ್ಲಿ ಹೆಣ್ಣಿನ ಕುರಿತ ಕವಿಯ ಸಾಂಪ್ರದಾಯಕ ನಿಲುವು ವ್ಯಕ್ತಗೊಂಡಿದೆ.

ಹೇ ದಿವ್ಯ ಸಾಮಾನ್ಯೆ
ಹೇ ಬವ್ಯೆ ದೇವಮಾನ್ಯೆ

ಎಂಬ ವೈಭವೀಕರಣದಲ್ಲಿ ಕವಿತೆ ಆರಂಭಗೊಳ್ಳುತ್ತದೆ. ಒಲೆಯ ಅಗ್ನಿಯೇ ಅವಳಿಗೆ ಪರ್ಣಶಾಲೆ. ಯಾಗಮುಖಿ . ಮತ್ತೆ ಬೇರೆ ಪೂಜೆ ಪುರಸ್ಕಾರಗಳ ಹಂಗು ಅವಳಿಗಿಲ್ಲ ಎಂದು ಹೇಳುತ್ತಾರೆ. ವ್ಯವಸ್ಥೆಯ ಬಿಗಿ ಹಿಡಿತದಲ್ಲಿ ಸಿಕ್ಕಿ ನಲುಗಿ ಹೋಗುವವಳ ಸ್ಥಿತಿಯನ್ನು ಕವಿ ಕಾಣುವುದಿಲ್ಲ. ಮನೆಯೆಂಬುದು ಹುತ್ತದಲಿರುವ ಸರ್ಪದ ಬೇಗೆಯಂತೆ ದಹಿಸುವ ಅನಾಮಧೇಯ ಗರತಿಯ ನೋವು ಕವಿಗೆ ಅರ್ಥವಾಗುವುದಿಲ್ಲ. ಎಲ್ಲ ವಿಧದ ಶೋಷಣೆಗೂ ವೈಚಾರಿಕವಾಗಿ ಸ್ಪಂದಿಸಿದ ಕವಿ ಕುವೆಂಪು ಹೆಣ್ಣಿನ ಸ್ಥಿತಿಯನ್ನು ಮಾತ್ರ ವೈಭವೀಕರಿಸುತ್ತಾರೆ. ಚಲನಶೀಲತೆಯನ್ನು ವಿರೋಧಿಸುವ ಜಡ ನಿಲುವನ್ನು ವ್ಯಕ್ತಪಡಿಸುತ್ತಾರೆ. ಹೆಣ್ಣು ಹೊಸ್ತಿಲು ದಾಟುವುದು ಬೇಡ. ವ್ಯಕ್ತಿತ್ವಕ್ಕಾಗಿ ಶ್ರಮಿಸುವುದು ಬೇಡ. ಅದೇನಿದ್ದರೂ ಗಂಡಿನ ಜಗತ್ತು ಎಂದು ಗಂಡಸಿನ ಹೆಂಗಸಿನ ಪ್ರಪಂಚವನ್ನು ಒಡೆದಿಡುತ್ತಾರೆ.

ಹಿಡಿಯದಿರಲಿ ನಿನಗಾದರೂ
ಗಂಡಸಾರಾ ಕುತ್ತ
ಪ್ರಖ್ಯಾತಿಯ ಪಡೆಯುವೊಂದು
ಪ್ರಾಪಂಚಿಕ ಪಿತ್ತ!
ಹೊಸಿಲಾಚೆಗೆ ನೀನೋತರೆ
ಹೊಸಿಲೀಚೆಗೆ ಬೆಳಕಿಲ್ಲ
ಹೆಸರಾಸೆಗೆ ನೀ ಸೋತರೆ
ಉಸಿರಾಸೆಯೆ ನಮಗಿಲ್ಲ!

ಎನ್ನುವಾಗ ಪ್ರಪಂಚದ ಬೇಕು-ಬೇಡಗಳನ್ನು ತಾನು ನಿರ್ಣಯಿಸ ಹೊರಟ ಪಿತೃವ್ಯವಸ್ಥೆಯ ಧೋರಣೆ ವ್ಯಕ್ತವಾಗುತ್ತದೆ. ಉಪಭೋಗಿ ಸಂಸ್ಕೃತಿಯ ಚಿಂತನೆಯಿದು. ಮನುವಾದವನ್ನು ಕುವೆಂಪು ಪ್ರತಿಭಟಿಸುತ್ತಾರೆ. ಆದರೆ ಹೆಣ್ಣಿನ ವಿಷಯದಲ್ಲಿ ಮನುವಾದವನ್ನು ಆದರ್ಶವೆಂಬಂತೆ ಒಪ್ಪುತ್ತಾರೆ! ವ್ಯವಸ್ಥೆಯ ಬಲಾಢ್ಯತೆಗೆ ಇದು ಸಾಕ್ಷಿ.

ತನ್ನ ಕಾಲದ ಎಲ್ಲ ವಿಧದ ಅನ್ಯಾಯಗಳಿಗೆ ದನಿಯೆತ್ತಿದ ಕುವೆಂಪು ಮಹಿಳಾ ಸಮಸ್ಯೆಯನ್ನು ಪ್ರಮುಖ ಕಾಳಜಿಯಾಗಿ ಸ್ವೀಕರಿಸಲಿಲ್ಲ. ವಿಧವಾ ಸಮಸ್ಯೆಯ ಕುರಿತ ಕವಿತೆಯೊಂದಿವೆ. ಬಿಟ್ಟರೆ ಉಪೇಕ್ಷಿತ ಧೋರಣೆಯೇ ಕಂಡುಬರುತ್ತದೆ. ಕವಿ ಏನು ಬರೆದಿಲ್ಲ ಎಂಬ ಉದ್ದೇಶಪೂರ್ವಕ ಮರೆವಿನ ಚರ್ಚೆಯೂ ಮಹತ್ವದ್ದು! ಒಂದು ಗುಬ್ಬಿ - ಗೊರವಂಕ - ಕಾಜಾಣಗಳು ಕಾಡಿದಂತೆ ಜ್ವಲಂತ ಮಹಿಳಾ ಸಮಸ್ಯೆಗಳು ಕವಿಯನ್ನು ಕಾಡಲಿಲ್ಲ. ಕಾವ್ಯದ ಮೌಲ್ಯ ಮಾಪನದಲ್ಲಿ ಕವಿಯ ಗ್ರಹಿಕೆಯ ನೆಲೆಗೆ ಮುಖ್ಯ ಸ್ಥಾನವಿದೆ.

# ಕೋಮುವಾದ ಮತ್ತು ಮಹಿಳೆ

ಕೋಮು ಸಂಘರ್ಷದ ಒಡಲಲ್ಲೇ ಜನಿಸಿದ ಸ್ವತಂತ್ರ ಭಾರತದಲ್ಲಿ ಕೋಮುವಾದಿ ಅಡ್ಡುಗೋಡೆಗಳು ಹೊಸದೇನಲ್ಲ, ಆದರೂ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಈ ಅಡ್ಡ ಗೋಡೆಗಳನ್ನು ಸಾಧ್ಯವಾದಷ್ಟು ಇಲ್ಲವಾಗಿಸಿಕೊಂಡು ಮಹಾತ್ಮ ಗಾಂಧಿಯವರ ನೇತೃತ್ವದದಲ್ಲಿ ನಡೆಸಿದ ಹೋರಾಟ ದೇಶಕ್ಕೆ ಜಯವನ್ನು ತಂದುಕೊಟ್ಟರೂ ಅದು ನೇತಾರನನ್ನು ಬಲಿತೆಗೆದುಕೊಂಡಿತು. ಇದರ ಜೊತೆಗೆ ಕೋಮು ಸಂಘರ್ಷದಿಂದ ತಮ್ಮ ಸ್ವ ಹಿತಾಸಕ್ತಿಯನ್ನು ಬೆಯಿಸಿಕೋಳ್ಳುತ್ತಿದ್ದ ಬ್ರಿಟಿಷರ ಒಡೆದು ಆಳುವ ನೀತಿಯು ಮತ್ತೊಂದು ಕಡೆ ಕೋಮುಗಳನ್ನು ದ್ವೀಪಗಳಾಗಿಸುತ್ತಾ ಹೋರಟವು. ಅದರ ಪರಿಣಾಮವಾಗಿ ರೂಪಗೊಂಡಿದ್ದು ಭಾರತ ಪಾಕಿಸ್ತಾನ ವಿಭಜನೆ. ಬ್ರಿಟೀಷರೇ ಹುಟ್ಟುಹಾಕಿದ ರಾಜಕೀಯದಿಂದ ಪಾಕಿಸ್ತಾನ ಭಾರತದಿಂದ ಬೇರ್ಪಡೆಯಾದಷ್ಟೇ ಅಲ್ಲ, ಹಿಂದೂ ಮುಸ್ಲಿಮರು ಎರಡು ಬೇರೆ ಬೇರೆ ದ್ವೀಪಗಳಾಗುವ ಪ್ರಕ್ರಿಯೆ ಆರಂಭವಾಯಿತು. ಸ್ವಾತಂತ್ರ್ಯನಂತರ ಬಂದ ಎಲ್ಲಾ ರಾಜಕೀಯ ಪಕ್ಷಗಳೂ ವೋಟಿನ ರಾಜಕೀಯದಲ್ಲಿ ಕೋಮುಗಳ ನಡುವಿನ ಅಡ್ಡ ಗೋಡೆಗಳನ್ನು ಗಟ್ಟಿಗೊಳಿಸುತ್ತಲೇ ಸಾಗಿವೆ. ಕಳೆದ ಒಂದು ದಶಕದ ಭಾರತೀಯ ವಿದ್ಯಮಾನಗಳನ್ನು ಗಮನಿಸಿದಾಗ ಕಂಡುಬರುವ ಅತ್ಯಂತ ನೋವಿನ ಸಂಗತಿಯೆಂದರೆ, ಸೆಕ್ಯುಲರ್ ಭಾರತಕ್ಕೆ ಮಸಿ ಬಳಿಯುವಂತೆ ಈ ಕೋಮು ಗೋಡೆಗಳು ಬಲಿಷ್ಠವಾಗುತ್ತಾ ಹೊರಟಿವೆ. ಕೋಮುಗಳು ದ್ವೀಪಗಳಾಗುವ ಪ್ರಕ್ರಿಯೆಯಲ್ಲಿ ಅವು ಹೆಚ್ಚು ಜಡ್ಡುಗಟ್ಟುತ್ತಾ ಅತ್ಯಂತ ಅಮಾನವೀಯವೂ ಕ್ರೂರಿಯು ಆಗುವುದನ್ನೂ ಕಾಣುತ್ತಿದ್ದೇವೆ.

ಬಹುಧರ್ಮಗಳ ಸೆಕ್ಯುಲರ್ ಭಾರತದಲ್ಲಿ ಎಲ್ಲ ಧರ್ಮಗಳಿಗೆ ಸೇರಿದ ಜನರಿಂದ ಚುನಾಯಿತವಾದ ಕೇಂದ್ರ ಸರ್ಕಾರ ಬಹುಸಂಖ್ಯಾತರ ಧರ್ಮವನ್ನು ಎಲ್ಲರ ಮೇಲೂ ಹೇರಲು ಹೊರಟದ್ದಕ್ಕೆ ಅಧಿಕಾರದ ಗದ್ದುಗೆಯಿಂದ ಇಳಿಯಬೇಕಾಯಿತೆಂಬುದನ್ನು ಇತ್ತೀಚಿನ ಚುನಾವಣೆಗಳು ಸ್ಪಷ್ಟಪಡಿಸಿವೆ. ಫ್ಯಾಸಿಸ್ಟ್ ಸ್ವರೂಪ ಹೊಂದುವ ಎಲ್ಲ ಧರ್ಮಗಳು ತಾವು ಬಹುಸಂಖ್ಯಾತರಾಗಿರುವಾಗ ತಮ್ಮ ನಡುವಿರುವ ಅಲ್ಪಸಂಖ್ಯಾತರ ಮೇಲೆ ಆಕ್ರಮಣ ನಡೆಸುವದು ಸರ್ವೇ ಸಾಮಾನ್ಯವಾಗಿ ಕಂಡುಬರುವ ಸಂಗತಿ. ಧರ್ಮದ ಇಂತಹ ಆಕ್ರಮಣಶೀಲ ಗುಣವು ಹೆಂಗಸರ ವಿಷಯದಲ್ಲಿ ಅತ್ಯಂತ ಕ್ರೂರವಾಗಿರುವುದನ್ನು ಚರಿತ್ರೆಯ ಸಂದರ್ಭದಲ್ಲಿ ನಾವು ನೋಡುತ್ತಲೇ ಬಂದಿದ್ದೇವೆ. ಸಮಾಜದಲ್ಲಿ ಮಹಿಳೆಯರ ಮೇಲೆ ಧರ್ಮವು ನಡೆಸುವ ನಿಯಂತ್ರಣದ ಕ್ರೂರ ಸಂಕೋಲೆಗಳು ಅವಳ ಬದುಕಿನ ಆಯ್ಕೆಯನ್ನು, ಆನಂದವನ್ನು ಮೊಟಕುಗೊಳಿಸಿವೆ.

ನೆರೆಯ ಪಾಕಿಸ್ತಾನದ ಮರ್ಯಾದಾಹತ್ಯೆಗಳು, ಆಫ್ಘಾನಿಸ್ತಾನದ ತಾಲಿಬಾನರ ಹುಚ್ಚಾಟಗಳು ಭಾರತದ ನೆಲದ ಸಂಪ್ರದಾಯವಾದಿ ಗಂಡಸರ ಚೇಷ್ಟೆಗಳಿಗಿಂತ ಭಿನ್ನವಾಗೇನೂ ಇಲ್ಲ. ಕಾಶ್ಮೀರ ಕಣಿವೆಯಲ್ಲಿ ಮುಸ್ಲಿಂ ಹೆಂಗಸರು ಬುರ್ಖಾ ಹಾಕದಿದ್ದರೆ ಗುಂಡಿಗೆ ಬಲಿಯಾಗುತ್ತಾರೆ, ಎಂದು ಹೆದರಿಸಿ ಭಯೋತ್ಪಾದಕರು ಅಲ್ಲಿನ ಹೆಂಗಸರ ಜೀವನವನ್ನು ದುರಂತಕ್ಕೀಡು ಮಾಡಿದರು. ಬುರ್ಖಾ ಹಾಕದ ಕೆಲವು ಹೆಂಗಸರ ಮೇಲೆ ಆಸಿಡ್ ಎರಚುವ ಪ್ರಯತ್ನಗಳೂ ನಡೆದವು. ಆದರ ಪರಿಣಾಮವಾಗಿ ನಮ್ಮ ದೇಶದ ನಾನಾ ಕಡೆಗಳಲ್ಲಿರುವ ಮುಸ್ಲಿಂ ಮಹಿಳೆಯರ ಬದುಕಿನ ಮೇಲೆ ನಿರ್ಬಂಧಗಳನ್ನು ಹೇರಲಾಯಿತು. ಕಳೆದ ಒಂದು ದಶಕದಲ್ಲಿ ನಮ್ಮ ಸುತ್ತಮುತ್ತಲ ವಾತಾವರಣವನ್ನು ಗಮನಿಸಿದಾಗ ಬುರ್ಖಾಧಾರಿ ಮಹಿಳೆಯರ ಸಂಖ್ಯೆ ಹೆಚ್ಚುತ್ತಿದೆ.

ಸಮಾಜದಲ್ಲಿ ಮಹಿಳೆಯರನ್ನು ಅವರ ಜಾತಿ, ಧರ್ಮಗಳ ಘನತೆಯ ಸೂಚಕವೆಂದು, ಸಂಸ್ಕೃತಿಯ ವಾಹಕರೆಂದು ಭಾವಿಸಲಾಗುತ್ತದೆ. ಆದ್ದರಿಂದಲೇ ಮಹಿಳೆಯರ ಮೇಲೆ ನಡೆಸುವ ಹಲ್ಲೆ, ಅತ್ಯಾಚಾರಗಳನ್ನು ಅನ್ಯ ಸಂಸ್ಕೃತಿಯವರಿಗೆ ಪಾಠ ಕಲಿಸುವ ಸಾಧನವಾಗಿ ಭಾವಿಸಲಾಗುತ್ತದೆ. ಗುಜರಾತಿನ ಕೋಮುಗಲಭೆಯಲ್ಲಿ ಆದದ್ದು ಇದೇ. ಹಾಗೆಯೇ ಕ್ರಿಶ್ಚಿಯನ್ ನನ್‌ಗಳ ಮೇಲೆ ಹಿಂದುತ್ವವಾದಿಗಳು ನಡೆಸಿದ ಆಕ್ರಮಣವು ಆ ಸಮುದಾಯಕ್ಕೆ ಬುದ್ಧಿ ಕಲಿಸಲೆಂದೇ. ಕ್ರಿಶ್ಚಿಯನ್ ಸಮುದಾಯದ ಮೇಲೆ ಹಿಂದುತ್ವವಾದಿಗಳು ನಡೆಸಿದ ದಾಳಿಗೆ ವ್ಯಾಪಕವಾದ ಅಜೆಂಡಾ ಇದೆ: ನಾಗರೀಕತೆಯಿಂದ ದೂರವಾದ ಬುಡಕಟ್ಟು ಸಮುದಾಯದ ನಡುವೆ ಕೆಲಸ ಮಾಡುತ್ತಿರುವ ಕ್ರಿಶ್ಚಿಯನ್ನರನ್ನು ಹೊಡೆದೋಡಿಸಲು. ಅವರಂತೆ ಕೆಲಸ ಮಾಡಲು ಸಾಧ್ಯವಿಲ್ಲದಿದ್ದರೂ ಹಿಂಸೆ, ಬೆದರಿಕೆಯ ಅಸ್ತ್ರವನ್ನು ಬಳಸುತ್ತಾ ಕ್ರೈಸ್ತ ಸಂನ್ಯಾಸಿಯರ ಮೇಲೆ ಆಕ್ರಮಣ ನಡೆಸಿದರು. ಒಟ್ಟಾರೆಯಾಗಿ ಎಲ್ಲ ಧರ್ಮಗಳು ಮೂಲಭೂತವಾಗಿ ಸ್ತ್ರೀಯರ ವಿಷಯದಲ್ಲಿ ನಿಷ್ಕರುಣೆಯಾಗಿಯೂ, ಅಮಾನವೀಯವಾಗಿಯೂ ನಡೆದುಕೊಂಡಿವೆ.

ಮಹಿಳೆಯರು ದಯಾಳುಗಳು, ಮಾತೃ ವಾತ್ಸಲ್ಯದ ಪ್ರತೀಕ, ಹಿಂಸೆಯನ್ನೆಂದೂ ಪ್ರಚೋದಿಸುವದಿಲ್ಲ ಎಂಬ ಪಾರಂಪರಿಕ ನಂಬಿಕೆಯನ್ನು ಸುಳ್ಳಾಗಿಸಬಲ್ಲ ಸಂದರ್ಭಗಳು ನಮ್ಮ ನಡುವೆ ವಿಜೃಂಭಿಸಿವೆ. "ಮಹಿಳೆಯರು ಮತ್ತು ಮತೀಯವಾದದ ಕತ್ತಲ ದಿನಗಳನ್ನು ಕುರಿತು "ಎಂಬ ಲೇಖನದಲ್ಲಿ ಕೋಮುವಾದ ಮಹಿಳೆಯರನ್ನು ಬಳಸಿಕೊಂಡ ರೀತಿಯನ್ನು ಶ್ರೀಮತಿ ಉಮಾ ಚಕ್ರವರ್ತಿಯವರು ಚಾರಿತ್ರಿಕವಾಗಿ ವಿಶ್ಲೇಷಿಸಿದ್ದಾರೆ.

ಇಂದಿರಾ ಗಾಂಧಿ ಹತ್ಯೆಯ ನಂತರ ನಡೆದ ಸಿಖ್ ವಿರೋಧಿ ಕಾರ್ಯಕ್ರಮಗಳಲ್ಲಿ ದೆಹಲಿಯ ಬೀದಿಯಲ್ಲಿ ಗುಂಪು ಘರ್ಷಣೆಯಾದಾಗ ಸಿಖ್ ಗಂಡಸರನ್ನು ಎಳೆದಾಡಿ ಸುಟ್ಟು ಚಚ್ಚಿ ಕೊಲ್ಲುತ್ತಿದ್ದಾಗ ಸಿಖ್ ಮಹಿಳೆಯರು ಅಸಹಾಯಕರಾಗಿ ಸುಮ್ಮನೆ ನೋಡುತ್ತಾ ಇರಬೇಕಾದ ಪರಿಸ್ಥಿತಿಯಿತ್ತು. ತಮ್ಮ ಮಗ, ಗಂಡ, ತಂದೆ ಸೋದರರು ಸಾಯುತ್ತಿದ್ದಾಗ ಅಸಹಾಯಕರಾಗಿ ನಿಂತು ನೋಡುತ್ತಿದ್ದ ಸಿಖ್ ಮಹಿಳೆಯರಿಗೆ ಜಾತಿ ಭೇದವನ್ನು ಮರೆತು ಎಲ್ಲ ಮಹೀಳೆಯರು ಪರಿಹಾರ ಕಾರ್ಯಗಳಲ್ಲಿ ನೆರವಾದರು. ಕೋಮುಭಾವನೆ ಹೆಂಗಸರ ಮನಸ್ಸು ಮತ್ತು ಕ್ರಿಯೆಗಳನ್ನು ಅಷ್ಟೋಂದು ಕಲುಷಿತಗೊಳಿಸಿರಲಿಲ್ಲ.

ಆದರೆ ಕಳೆದ ಶತಮಾನದ ತೊಂಬತ್ತರ ದಶಕದಲ್ಲಿ ರೂಪಗೊಂಡ ಬಲಪಂಥೀಯ ಧಾರ್ಮಿಕ ಫ್ಯಾಸಿಸ್ಟ್ ಸಂಘಟನೆಯು ಹಿಂದುತ್ವದ ಹೆಸರಿನಲ್ಲಿ ಉಂಟುಮಾಡುತ್ತಿರುವ ದಾಂಧಲೆಯು ಕೋಮುವಾದದ ಕರಾಳ ಮುಖವನ್ನು ತೋರಿಸುತ್ತಿದೆ.

ಅಯೋಧ್ಯಾ ರಾಮಮಂದಿರದ ಹೆಸರಿನಲ್ಲಿ ಭಾಗಲ್ಪುರದಲ್ಲಿ ನಡೆದ ರಕ್ತದೋಕುಳಿಯ ಸಂದರ್ಭದಲ್ಲಿ ಮಹಿಳೆಯರು ದಿಢೀರನೆ ಕ್ರಿಯಾಶೀಲರಾದರು. ಆಗ ಅವರು ಮೂಕ ಪ್ರೇಕ್ಷಕರಾಗಿ ಕುಳಿತಿರಲಿಲ್ಲ, ದ್ವೇಷದ ಜ್ವಾಲೆಯನ್ನು ಹತ್ತಿಸುವಲ್ಲಿ, ಕೊಲೆ ಸುಲಿಗೆಗಳನ್ನು ನಡೆಸಿದ ಧರ್ಮ ಪ್ರಚಾರದ ಜೊತೆ ಕೈಗೂಡಿಸಿದರು. ಆದ್ದರಿಂದಲೇ ಹೆಂಗಸರನ್ನು ಕೋಮು ಗಲಭೆಯ ಬಲಿಪಶುಗಳನ್ನಾಗಿ ಮಾತ್ರ ನೋಡಲು ಸಾಧ್ಯವಿಲ್ಲ. ಅಲ್ಪ ಸಂಖ್ಯಾತ ಮಹಿಳೆಯರು ನೋವು ನಲಿವುಗಳ ಭಾಗವಾದಷ್ಟೇ ಬಹುಸಂಖ್ಯಾತ ಸಮುದಾಯದ ಮಹಿಳೆಯರಾಗಿಯೂ ಬೇರೆಯವರು ಬಲಿಪಶುಗಳಾಗುವುದಕ್ಕೂ ಮಹಿಳೆಯರು ಸಾಕ್ಷಿಯಾದರು. ಹೀಗೆ ಬಲಿಪಶುಗಳಾಗುವ ಮತ್ತು ಹಿಂಸೆಯನ್ನು ಪ್ರಚೋದಿಸುವ ಎರಡೂ ನೆಲೆಯಲ್ಲಿನ ಹೆಂಗಸರ ಪಾತ್ರ ಅತ್ಯಂತ ಸಂಕೀರ್ಣವಾದುದು. ಅವರು ಜೀವಿಸುತ್ತಿರುವ ಸಂದರ್ಭದ ಸಾಮಾಜಿಕ, ರಾಜಕೀಯ ಒತ್ತಡಗಳೇ ಈ ಸಂದರ್ಭವನ್ನು ನಿರ್ಧರಿಸುತ್ತವೆ. ಭಾಗಲ್‌ಪುರ, ಅಹಮದಾಬಾದ, ಅಯೋಧ್ಯಾ, ಮುಂಬೈ ಮತ್ತು ಸೂರತ್ ಮುಂತಾದೆಡೆಗಳಲ್ಲಿ ನಡೆದ ಗಲಭೆಗಳು ಮಹಿಳೆ ಮತ್ತು ಕೋಮುವಾದದ ಬಗ್ಗೆ ಮತ್ತೆ ಮರುಚಿಂತನೆ ನಡೆಸುವಂತೆ ಮಾಡುತ್ತವೆ.

ಡಿಸೆಂಬರ್ 89 ಮತ್ತು ಜನವರಿ 90 ರಲ್ಲಿ ಭಾಗಲ್‌ಪುರದಲ್ಲಿ ನಡೆದ ದೊಂಬಿ, ಲೂಟಿಗಳು ಕೋಮು ಕ್ರೌರ್ಯಕ್ಕೆ ಹೊಸ ಆಯಾಮವನ್ನೇ ಕೊಟ್ಟವು. ವಿಶ್ವ ಹಿಂದೂ ಪರಿಷತ್ತಿನಿಂದ ಪ್ರಚೋದಿಸಲ್ಪಟ್ಟು ಕಾಳ್ಗಿಚ್ಚಿನಂತೆ ಹಬ್ಬಿದ ಈ ಕ್ರೌರ್ಯ ಸಾವಿರಕ್ಕೂ ಹೆಚ್ಚು ಜನರನ್ನು ಬಲಿ ತೆಗೆದುಕೊಂಡಿತು. ಹೆಂಗಸರ ದೇಹಗಳು ಛಿದ್ರ ಛಿದ್ರವಾದವು. ದೇಶ ಇಬ್ಭಾಗವಾದ ನಂತರ ನಡೆದ ಅತ್ಯಂತ ಕ್ರೌರ್ಯದ ಘಟನೆ ಇದು. ಈ ಘಟನೆಯಿಂದ ಅಳಿದುಳಿದ ಹೆಂಗಸರ ಮನೋಕ್ಷೋಭೆ ಊಹೆಗೂ ನಿಲುಕದ್ದು. ಗಲಭೆಯಲ್ಲಿ ಮುಳುಗಿದ್ದ ಗಂಡಸರಿಗೆ ಪ್ರಚೋದನೆ ಕೊಡುತ್ತಿದ್ದ ಹೆಂಗಸರು ಈ ಗುಂಪಿನ ಲ್ಲಿದ್ದರು. ಈ ಸಂದರ್ಭದಲ್ಲಿ ಅಲ್ಲಿಗೆ ಭೇಟಿ ಕೊಟ್ಟವರು ನೀಡಿದ ಮತ್ತು ಪತ್ರಿಕೆಗಳಲ್ಲಿ ವರದಿಯಾದ ಕತೆಗಳು ನಿಜಕ್ಕೂ ಗಾಬರಿ ಹುಟ್ಟಿಸುತ್ತವೆ. ಮೊಹಲ್ಲಾದಲ್ಲಿ ಹೆಂಗಸೊಬ್ಬಳು ತಮ್ಮ ಗಂಡಸರಿಗೆ ಮುದುಕರನ್ನು ಹೊಡೆಯುವದಕ್ಕಿಂತ ಯುವಕರನ್ನು ಸಾಯಿಸಲು ಹೇಳುತ್ತಿದ್ದಳಂತೆ, ಏಕೆಂದರೆ ಯುವಕ ಬದುಕುಳಿದರೆ ಅವನು ಸಂತಾನಕ್ಕೆ ಕಾರಣನಾಗುತ್ತಾನೆ, ಎಂಬುದು ಅವಳ ತರ್ಕ, ಆ ಸಂದರ್ಭದಲ್ಲಿ ಒಬ್ಬ ಹಿಂದೂ ವಿಧವೆ ಶಾಲಾ ಶಿಕ್ಷಕಿಗಾದ ದುರವಸ್ಥೆಯಂತೂ ಶೋಚನೀಯ. ಮುಸ್ಲಿಂ ರಿಗೆ ಆಶ್ರಯ ನೀಡಿದ ಈ ಶಾಲಾ ಶಿಕ್ಷಕರಿಗೆ ಮನೆಯಿಂದ ಹೊರಗೆ ಬರಲು ಹೇಳಿ ಮುಸ್ಲಿಂರಿದ್ದ ಆ ಮನೆಗೆ ಬೆಂಕಿ ಹಚ್ಚಿದರು. ಕೆಲವು ಘಂಟೆಗಳ ನಂತರ ಹಿಂತುರುಗಿ ಬಂದ ಶಾಲಾ ಶಿಕ್ಷಕಿ ಅಳಿದುಳಿದ ಜನ ಬಾಯಾರಿಕೆಗಾಗಿ ನೀರು ಕೇಳಿದಾಗ, ನೀರು ಕೊಟ್ಟ ಅವಳಿಗೆ ಅವಳ ಸುತ್ತಮುತ್ತಲಿದ್ದ ಮಹಿಳೆಯರು ಛೀಮಾರಿ ಹಾಕಿದರು.

ಇದೆಲ್ಲಕ್ಕಿಂತ ಅತ್ಯಂತ ಭಯಾನಕವಾದ ಅನುಭವವೆಂದರೆ ಈ ಸಂದರ್ಭದಲ್ಲಿ ಸಾಧ್ವೀ ರಿತಂಭರ ನಡೆದುಕೊಂಡ ರೀತಿ. ರಾಮ ಜನ್ಮ ಭೂಮಿಯ ಪ್ರಚಾರದ ಸಂಧರ್ಭದಲ್ಲಿ ಹಿಂದೂ ಪುರುಷರ ಪುರುಷತ್ವವನ್ನು ಪ್ರಚೋದಿಸುವಂತೆ ಅವಳು ಮಾಡುತ್ತಿದ್ದ ಭಾಷಣಗಳು ಮತ್ತು ಆ ಭಾಷಣಗಳ ಧ್ವನಿಸುರಳಿ ಸಹಸ್ರಾರು ಸಂಖೆಯಲ್ಲಿ ಕೋಮು ಭಾನೆಯನ್ನು ಪ್ರಚೋದಿಸುವ ಮಂತ್ರವಾಯಿತು. ಹೀಗೆ ಅಲ್ಪಸಂಖ್ಯಾತ ಸಮುದಾಯದ ಹೆಂಗಸರಷ್ಟೇ ಬಹುಸಂಖ್ಯಾತ ಸಮುದಾಯದ ಮಹಿಳೆಯರೂ ಕೋಮುಗಲಭೆಯ ಬಲಿಪಶುಗಳಾಗಿ ನರಳಿದರೂ, ವಾಸ್ತವದಲ್ಲಿ ಕೋಮು ಭಾವನೆಯನ್ನು ಪ್ರಚೋದಿಸುವಲ್ಲಿ ಅವರು ನೇತೃತ್ವ ವಹಿಸಿದರೆಂಬುದು ದುರಂತದ ಸತ್ಯ ಸಂಗತಿ.

ಕಳೆದ ವರ್ಷ ಗುಜರಾತಿನಲ್ಲಿ ಒಂದು ಜನಾಂಗವನ್ನೇ ನಿರ್ಮೂಲನ ಮಾಡಲು ಹೊರಟ ಗುಜರಾತಿನ ಹಿಂದೂ ವೀರರು ಆ ಕಾರ್ಯಕ್ಕೆ ಮುಖ್ಯವಾಗಿ ಆರಿಸಿಕೊಂಡದ್ದು ಮಹಿಳೆಯನ್ನು ಮತ್ತು ಮಕ್ಕಳನ್ನು. ಎಲ್ಲ ಹೆಂಗಸರನ್ನು ಮಾತೆಯರೆಂದು ಗೌರವಿಸುವ, ಸಂಭೋಧಿಸುವ ಸಂಘಗಳಿಗೆ ಬೇರೆ ಧರ್ಮದ ಮಾತೆಯರು ಲೈಂಗಿಕ ಸಾಧನಗಳಾಗಿ ಬಿಟ್ಟರು. ಶಿಶು ಹತ್ಯೆ ಮಹಾಪಾತಕವೆಂದು ಹೇಳುವ ಸಂಸ್ಕೃತಿಯ ವಕ್ತಾರರು ಬೇರೆ ಧರ್ಮದ ಮಹಿಳೆಯರ ಗರ್ಭ ಬಗೆದು ಶಿಶುವನ್ನು ಕೊಲ್ಲುವ ನೀಚ ಮಟ್ಟಕ್ಕೂ ಇಳಿಯಬಹುದಾದರೆ ಸಂಸ್ಕೃತಿಯ ರಕ್ಷಣೆಯೆನ್ನುವದು ಎಷ್ಟು ಅಮಾನವೀಯವಾದ ಮತ್ತು ನಾಚಿಕೆಗೇಡಿನ ಕ್ರಮ.

ಗುಜರಾತಿನ ಹತ್ಯಾಕಾಂಡದ ಸಮಯದಲ್ಲಿ ಒಬ್ಬ ಹಿಂದೂ ಮಹಿಳೆ ತನ್ನ ಗಂಡ ಮನೆಯಿಂದ ಹೊರಗೆ ಹೋಗಿ ದೊಂಬಿ ನಡೆಸುತ್ತಿದ್ದ ಗುಂಪನ್ನು ಸೇರದಂತೆ ತಡೆದಳು. ಅವಳ ಈ ಕೋರಿಕೆಯನ್ನು ಮನ್ನಿಸದ ಗಂಡ ಹೊರಗೆ ಹೋದದ್ದಷ್ಟೇ ಅಲ್ಲ, ನಂತರ ಮನೆಗೆ ಬಂದು ನೆಂಟರನ್ನು ಸೇರಿಸಿಕೊಂಡು ಹೆಂಡತಿಯನ್ನು ದನ ಬಡಿಯುವಂತೆ ಬಡಿದ. ಅವಳ ಮೇಲೆ ಸೀಮೆ ಎಣ್ಣೆ ಸುರಿದು ಬೆಂಕಿ ಹಚ್ಚಿದ. ಅವನ ದುರಾದೃಷ್ಟ, ಸತ್ತೇ ಹೋಗಬೇಕಿದ್ದ ಅವಳು ಬದುಕುಳಿದು ಈ ಕಥೆಯನ್ನು ವರದಿ ಮಾಡಿದಳು, ಎಂದು ಹಿಂದೂ ಪತ್ರಿಕೆಯಲ್ಲಿ ವರದಿಯಾಗಿತ್ತು. ಕೋಮುದ್ವೇಷ ಬೇರೆಯವರನ್ನು ಸುಡುವುದಿರಲಿ, ತಮ್ಮ ಮನೆಯನ್ನೇ ಸುಡಬಲ್ಲದು ಎಂಬುದರ ಬಗೆಗೆ ಅರಿವಾಗದಷ್ಟು ಈ ಜನ ಮತಾಂಧರಾಗಿರುತ್ತಾರೆ.

ಇಂದು ಸ್ತ್ರೀ ವಾದಿಗಳು ಪುರುಷ ದಬ್ಬಾಳಿಕೆಯ ವಿರುದ್ಧ ಎತ್ತುತ್ತಿರುವ ಧ್ವನಿಗಳನ್ನು ಸದೆಬಡಿಯುವ ಪ್ರಯತ್ನವಾಗಿಯೂ ಕೋಮು ಹಿಂಸೆ ತಲೆ ಎತ್ತುತ್ತಿದೆ. ಸಂಸ್ಕೃತೀಯ ಕವಚದಲ್ಲಿ ಹಿಂದೂ ಸಮಾಜದ ಎಲ್ಲ ಕೊಳಕು ಆಚರಣೆಗಳನ್ನು ಮುಚ್ಚಿಟ್ಟುಕೊಳ್ಳುವ ಮನೋಭಾವ, ವಾಟರ್ ಚಿತ್ರದಲ್ಲಿ ಎದ್ದು ಕಾಣುತ್ತದೆ. ಸ್ತ್ರೀಯರಿಬ್ಬರ ನಡುವಿನ ಲೆಸ್‌ಬಿಯನ್ ಸಂಬಂಧಗಳನ್ನು ವಿರೋಧಿಸಬೇಕೆನ್ನುವ ಸಂದರ್ಭದಲ್ಲಿ ಅವರಿಗಗೆ ಕೌಟುಂಬಿಕ ಹಿಂಸೆಯ ನೆಲೆಗಳು ಕಾಣಿಸುವುದೇ ಇಲ್ಲ. ವಾರಣಾಸಿಯ ವಿಧವೆಯರ ನೋವಿಗೆ ಸ್ಪಂದಿಸದ ಹಿಂದೂತ್ವವಾದಿಗಳು ವಿರೋಧಿಸಿದ್ದು ಅವರ ಮೂಲಭೂತವಾದಿ ಫ್ಯಾಸಿಸ್ಟ್ ಮನೋಭಾವಕ್ಕೆ ಹಿಡಿದ ಕೈ ಗನ್ನಡಿಯಾಗಿದೆ. ಈ ಚಿತ್ರಗಳ ವಿರುದ್ಧದ ಪ್ರತಿಭಟನೆಯಲ್ಲಿ

REGISTERED CPMG/KA/BG-8/2003-05 RNI No. 45577/88

*Posted at Basavanagudi P.O. On the 25th of every Month*

ಮಹಿಳೆಯರೂ ಪ್ರಮುಖ ಪಾತ್ರ ವಹಿಸಿದರು ಎಂಬ ಅಂಶವನ್ನು ಅಲ್ಲಗೆಳೆಯಲಾಗದು.

ಇಂದು ಬಲ ಪಂಥೀಯ ರಾಜಕೀಯ ಪಕ್ಷಗಳು ಕೋಮು ಭಾವನೆಗಳನ್ನು ಕೆರಳಿಸುತ್ತಾ ಕೋಮಿನ ಆಧಾರದ ಮೇಲೆ ಹೆಚ್ಚು ಹೆಚ್ಚು ಮಹಿಳೆಯರನ್ನು ಸಂಘಟಿಸುವತ್ತ ಒಲವು ತೋರುತ್ತಿವೆ. ಈ ಮಹಿಳೆಯರು ಪಕ್ಷಗಳ ಮುಖವಾಣಿಗಳಾಗುತ್ತಿರುವುದು ಅತ್ಯಂತ ದುರದೃಷ್ಟ. ಶಾಬಾನೋ ಪ್ರಕರಣದಲ್ಲಿ ಸುಪ್ರಿಂಕೋರ್ಟಿನ ತೀರ್ಪನ್ನು ತಿರುಚುವಂತೆ ಕಾಂಗ್ರೆಸ್ ಪಕ್ಷದ ಮಹಿಳೆಯರು ನಡೆದುಕೊಂಡಿದ್ದು ಇತಿಹಾಸದಲ್ಲಿ ದಾಖಲಾಗಿದೆ. ಮಾರ್ಗರೇಟ್ ಆಳ್ವ ಕೂಡ ಮುಸ್ಲಿಂ ಮಹಿಳೆಯರ ಪರವಾಗಿ ನಿಲ್ಲುವದಕ್ಕಿಂತ ಮುಲ್ಲಾಗಳನ್ನು ಮುಸ್ಲಿಂ ನಾಯಕರನ್ನು ಬೆಂಬಲಿಸಿದರು. ವರಮಹಾಲಕ್ಷ್ಮಿ ವ್ರತಕ್ಕೆ ಪ್ರತಿವರ್ಷ ತವರಿಗೆ ಬರುವ ಹೆಣ್ಣುಮಗಳಂತೆ ವ್ರತ ಹಿಡಿದಿರುವ ಸುಷ್ಮಾ ಸ್ವರಾಜ್ ಬಳ್ಳಾರಿಗೆ ಬಂದು ಮಾಡಿರುವುದಾದರೂ ಏನು ? ಚುಣಾವಣೆಯ ಸಮಯದಲ್ಲಿ ಸೋನಿಯಾ ವಿರುದ್ಧ ಸ್ಪರ್ಧಿಸಿದಾಗ ಅರಿಶಿನ ಕುಂಕುಮದ ಬಾಗಿನವನ್ನು ಅಲ್ಲಿದ್ದ ಹೆಂಗಳೆಯರಿಗೆ ನೀಡಿ ತಮ್ಮ ಮುತ್ತೈದೆತನವನ್ನು ಪ್ರದರ್ಶಿಸಿದರು. ಹಾಗೆ ಮಾಡುವ ಮೂಲಕ ತಮ್ಮ ವಿರುದ್ಧ ನಿಂತ ಮಹಿಳೆಯ ವೈಧವ್ಯವನ್ನು ಅಣುಕಿಸಿದ್ದೂ ಆಯಿತು. ಹಾಗೆಯೇ ಸೋನಿಯಾ ಪ್ರಧಾನಿಯಾಗಿಬಿಡುತ್ತಾರೆಂಬ ಸುದ್ದಿ ಪ್ರಕಟವಾದೊಡನೆ ಉಮಾಭಾರತಿ ಮತ್ತು ಸುಷ್ಮಾ ನಡೆದುಕೊಂಡ ರೀತಿ, ಆಡಿದ ಮಾತು ದೇಶದ ಮಹಿಳಾ ಸಂಕುಲಕ್ಕೆ ಅವಮಾನ ಮಾಡುವಂತಹದು. ತಲೆ ಬೋಳಿಸಿ ಹೆಣ್ಣನ್ನು ಕುರೂಪು ಮಾಡುವ ಸಾಮಾಜಿಕ ಅನಿಷ್ಟ ಪದ್ಧತಿಗೆ ಜೀವ ನೀಡಿ ಕೆಲವಾದರೂ ಮಹಿಳೆಯರ ಪ್ರತಿನಿಧಿಗಳಾಗುವ ಹುನ್ನಾರ ಪ್ರದರ್ಶಿಸಿದರು. ಅವರ ಪಕ್ಷದ ಕಾರ್ಯಕ್ರಮವೊಂದರಲ್ಲಿ ಐವತ್ತು ರೂಗಳ ಸೀರೆಯ ಆಸೆಗೆಂದು ಬಂದು ಜೀವತೆತ್ತ ಹೆಂಗಳೆಯರ ಸಾವಿಗೆ ಅನುಕಂಪದ ಮಾತೂ ಇಲ್ಲದ ಈ ಮಹಿಳಾ ರಾಜಕಾರಣಿಗಳ ಸಾಮಾಜಿಕ ಕಾಳಜಿ ಎತ್ತ ಸಾಗಿದೆ ?

ಆದ್ದರಿಂದಲೇ ಇಂದು ಸಾಧ್ವಿ ರಿತಂಬರಾ ಮತ್ತು ಉಮಾ ಭಾರತಿಯವರು ಹಿಂದುತ್ವದ ರಚನೆಯನ್ನು ಉಳಿಸಿಕೊಳ್ಳಲು ಅತ್ಯಂತ ಅವಶ್ಯಕ ಶಕ್ತಿಗಳಾಗಿ ನಮಗೆ ಕಾಣಸಿಗುತ್ತಾರೆ. ಕುಟುಂಬದೊಳಗೆ ಹೆಣ್ಣನ್ನು ಶೋಷಿಸುವ ಪುರುಷರ ಧಾರ್ಮಿಕ ಜೀವನದಲ್ಲಿ ಸಮುದಾಯಗಳಲ್ಲಿ ಧಾರ್ಮಿಕ ಹೀರೋಗಳಾಗಿ ಬಿಡುವುದರಿಂದ ಮಹಿಳೆಯರಿಗೆ ತಮ್ಮ ಶೋಷಣೆಯ ನೆಲೆಗಳೇ ಅರ್ಥವಾಗದಿರ ಬಹುದು. ಹಿಂದುತ್ವದ ಈ ಸೈದ್ಧಾಂತಿಕ ಕಾರ್ಯತಂತ್ರಕ್ಕೆ ಮಹಿಳಾ ಸಮುದಾಯ ಪ್ರತಿಕ್ರಿಯಿಸುವಾಗ ಅತ್ಯಂತ ಜಾಗರೂಕವಾಗಿರಬೇಕು. ಮಹಿಳೆಯರು ತಾವು ಬದುಕುವ ಸನ್ನಿವೇಶದ ಸಂಕೀರ್ಣತೆಯನ್ನು ಅರ್ಥಮಾಡಿಕೊಂಡು ಅತ್ಯಂತ ವಿಶಾಲವಾದ ಸಮಾನತೆಯ ಪ್ರಜಾಪ್ರಭುತ್ವವಾದಿ ವೇದಿಕೆಯ ನಿರ್ಮಾಣದತ್ತ ಕೆಲಸ ಮಾಡಬೇಕು. ಸ್ತ್ರೀ ಪುರುಷರಿಬ್ಬರೂ ಒಟ್ಟಾಗಿ ಸೇರಿ ನಡೆಸಬೇಕಾದ ಈ ಹೋರಾಟವು ಮಾನವೀಯತೆಯ ಮೌಲ್ಯಗಳನ್ನು ಆರಾಧಿಸುವ, ಪುರುಷ ಪ್ರಾಧಾನ್ಯವಲ್ಲದ, ವ್ಯಕ್ತಿಗಳಾಗಲೀ ಮತ್ತು ಸಮುದಾಯವಾಗಲೀ ಬಲಿ ಪಶುಗಳಾದಂತಹ ಸಮಾಜ ರಚನೆಯನ್ನು ದೃಷ್ಟಿಯಲ್ಲಿಟ್ಟುಕೊಳ್ಳಬೇಕು. ಪುರುಷ ಪ್ರಧಾನದ ಎಲ್ಲ ಲಕ್ಷಣಗಳನ್ನು ಒಳಗೊಂಡ ಧಾರ್ಮಿಕ ಜಡ್ಡುತನವನ್ನು ಎಲ್ಲ ನೆಲೆಗಳಲ್ಲೂ ವಿರೋಧಿಸುವಂತ ಸಂಸ್ಕೃತಿಯ ರಚನೆಯೇ ಇಂದು ಮಹಿಳಾ ಚಳುವಳಿಯ ಮುಂದಿರುವ ಸವಾಲು.

- ಎನ್. ಗಾಯತ್ರಿ.

"Achala" 108, Skyline Surabhi,
14 - P , Vidyapeeta Road,
BSK III Stage,
Bangalore - 560 085

To :

Smt/Sri